೨೮೯ ಉಪನ್ಯಾಸ ಗ್ರಂಥಮಾಲೆ

# ಶ್ರೀ ಚಿದಾನಂದಾವಧೂತರು: ಅವರ ಕೃತಿಗಳು

ಪ್ರೊ. ಆಯ್. ಆಯ್. ಕಳಕಣ್ಣವರ, ಎಂ. ಎ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
ಜೂನ್ ೧೯೭೮

ಉಪನ್ಯಾಸ ಗ್ರಂಥಮಾಲೆ

೨೮೯

# ಶ್ರೀ ಚಿದಾನಂದಾವಧೂತರು:
## ಅವರ ಕೃತಿಗಳು

ಪ್ರೊ. ಆಯ್. ಆಯ್. ಕಳಕಣ್ಣವರ, ಎಂ. ಎ.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜೂನ್, ೧೯೭೮

ಪ್ರಕಾಶಕರು :

ಸಿ. ಎಸ್. ಕಣವಿ,
ನಿರ್ದೇಶಕರು,
ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ವಿಭಾಗ,
ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ.

ಪ್ರಥಮ ಮುದ್ರಣ : ೫೦೦೦ ಪ್ರತಿಗಳು

ಜೂನ್, ೧೯೭೮



ಬೆಲೆ : ೨೫ ಪೈಸೆ

ಮುದ್ರಕರು :

ಸದಾನಂದ ಎಸ್. ಪವಾರ,
ಸದಾನಂದ ಪ್ರಿಂಟರ್ಸ್,
ಮಾರ್ಕೆಟ್, ಧಾರವಾಡ.

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ಶಾಖೆಯ ಮುಖಾಂತರ ಕೈಕೊಂಡು ನಡೆಸು ತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರು ವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರ ಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರ ಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು

ತಮ್ಮ ತಮ್ಮ ಊರುಗಳಲ್ಲಿ ಉಪನ್ಯಾಸಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು, ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಬಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೨೮೮ ಪುಸ್ತಕಗಳು ಪ್ರಕಟವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ

ಎಸ್. ಎಸ್. ಒಡೆಯರ
ಕುಲಪತಿಗಳು

# ಅರಿಕೆ

ಈ ಪುಸ್ತಿಕೆಯನ್ನು ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯ ಆದ್ವಾನಿ ತಾಲೂಕಿನ ದೊಡ್ಡ ಹರಿವಾಣದಲ್ಲಿ ೨೭-೧-೧೯೭೮ ನೆಯ ದಿವಸ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ವಿಭಾಗದ ೨೫೩ನೆಯ ಉಪನ್ಯಾಸ ಶಿಬಿರದ ಆಶ್ರಯದಲ್ಲಿ ನಾನು ಮಾಡಿದ ಭಾಷಣವನ್ನು ಆಧರಿಸಿ ಬರೆಯಲಾಗಿದೆ.

ಅನೇಕ ಜನ್ಮಗಳ ಪುಣ್ಯಸಂಚಯದಿಂದ ಮಾನವನಾಗಿ ಜನಿಸಿ ಬಂದ ಮೇಲೆ ತನ್ನ ಹಿನ್ನೆಲೆಯನ್ನರಿತು ಧರ್ಮವಂತನಾಗಿ, ನೀತಿವಂತನಾಗಿ, ಆಚಾರವಂತನಾಗಿ, ಬುದ್ಧಿವಂತನಾಗಿ, ಕೊನೆಗೆ ಜ್ಞಾನವಂತನಾಗಿ, ಆ ಪರಶಿವನಲ್ಲಿ ನಿತ್ಯ ಸುಖದಾಯಕವಾದ ಮುಕ್ತಿಯನ್ನು ಪಡೆಯಬೇಕು; ಇದು ಎಲ್ಲ ಜೀವಾತ್ಮರ ಜೀವನದ ಮುಖ್ಯ ಉದ್ದೇಶವಾಗಿದೆ.

ಈ ದಿಶೆಯಲ್ಲಿ ಅನೇಕ ವಿಚಾರಗಳು ನಾನು ಆಧ್ಯಾತ್ಮಿಕ ರಂಗದಲ್ಲಿ ಪ್ರವೇಶಿಸಿದಾಗಿನಿಂದ ನನ್ನೆದುರಿನಲ್ಲಿ ಬಂದು ನಿಲ್ಲುತ್ತಿದ್ದವು. ಅವೆಲ್ಲ ವಿಚಾರಗಳು ಅನುಭವವೇದ್ಯವಾಗಿ ಬರಲು ಸಮಯ ಬೇಕಾಗುತ್ತದೆ. ಆಗ ವಿಚಾರಪ್ರವಾಹಗಳನ್ನು

ಬುಧವರ್ಗ ನಿರೀಕ್ಷಿಸಿ ಅದಕ್ಕೆ ತಕ್ಕ ಒಪ್ಪಿಗೆಯಿಂದ ಪುರಸ್ಕರಿಸು ವುದು ಒಂದು ಪದ್ಧತಿ. ಇಂಥ ನನ್ನ ಅನೇಕ ದಿನಗಳ ಮನೋ ಬಯಕೆ ಕೂಡಿಬಂದಿತೆಂಬಂತೆ ನನ್ನಲ್ಲಿ ಅವ್ಯಕ್ತವಾಗಿದ್ದ ಅನೇಕ ಬಯಕೆಯ ಪುಷ್ಪಗುಚ್ಛವನ್ನು ಶ್ರೀ ಸದ್ಗುರು ಚಿದಾನಂದಾವ ಧೂತರು: ಅವರ ಕೃತಿಗಳು ಎಂಬ ಭೂಮಿಕೆಯ ಮೇಲೆ ಅರ್ಪಿಸಿದ್ದೇನೆ.

ದೊಡ್ಡ ಹರಿವಾಣದ ಕರ್ನಾಟಕ ಸಂಘದ ಸದಸ್ಯರು ಶ್ರೀ ಸದ್ಗುರು ಚಿದಾನಂದಾವಧೂತರ ಸಂಬಂಧಿಕರು ಕೊಡಮಾಡಿದ ಕೆಲವು ಹಿತನುಡಿಗಳೂ ಸಹ ಇದಕ್ಕೆ ನವಚೇತನ ವನ್ನು ನೀಡಿವೆ. ಈ ನನ್ನ ಅಲ್ಪಮತಿಯ ವಿಚಾರ ಚಿಂತನೆಗೆ ಅವಕಾಶವನ್ನು ಒದಗಿಸಿಕೊಟ್ಟುದಕ್ಕಾಗಿ ಅವರೆಲ್ಲರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳು. ಇದಕ್ಕೆ ಪ್ರತ್ಯಕ್ಷ ಅಪ್ರತ್ಯಕ್ಷ ಸಹಾಯ ಸಹಕಾರವನ್ನಿತ್ತ ಎಲ್ಲ ನನ್ನ ಆತ್ಮೀಯ ಬಂಧುಗಳನ್ನು ನೆನೆಯದಿರಲಾರೆನು.

ಶ್ರೀ ಸದ್ಗುರು ಶಿವಾನಂದ
ಕಾಲೇಜ, ಕಾಗವಾಡ. ಆಯ್. ಆಯ್. ಕಳಕಣ್ಣವರ
(ಜಿಲ್ಲಾ ಬೆಳಗಾವಿ)

# ಪರಿವಿಡಿ

# ೧. ಹಿನ್ನೆಲೆ

## ಜೀವನದ ಉಗಮ :

ಅನ್ನಮಯಕೋಶಕ್ಕೆ ಸಂಬಂಧಪಟ್ಟ ಆಹಾರ, ನಿದ್ರೆ, ಮೈಥುನ ಮೊದಲಾದ ಮೂಲಭೂತವಾದ ತೃಷೆಗಳಲ್ಲಿ ಮನುಷ್ಯನು ಕೇವಲ ಒಂದು ಪ್ರಾಣಿಯೇ ಆದರೂ, ಅವು ಗಳನ್ನು ತನ್ನ ಜೀವನಕ್ಕೆ ಅಳವಡಿಸಿಕೊಳ್ಳುವ ರೀತಿಯಲ್ಲಿ ಮತ್ತು ಅವುಗಳನ್ನು ಕುರಿತು ಸಂಯಮ ತೋರುವಲ್ಲಿ ಪ್ರಾಣಿಲೋಕವನ್ನು ಮೀರಿ ಮುಂದೆ ಹೋಗುತ್ತಾನೆ. ಅಲ್ಪ ಸುಖದಿಂದ ತೃಪ್ತನಾಗದೆ ಚಿರಂತನ ಆನಂದವನ್ನು ಹುಡು ಕತೊಡಗುತ್ತಾನೆ. ಮನುಷ್ಯನ ನಿರಂತರ ಹೋರಾಟದ ಮುಖ್ಯ ಗುರಿಯೇನು? ಎಂಬ ಪ್ರಶ್ನೆಗೆ ವ್ಯಾಪಕವಾದ ಒಂದೇ ಮಾತಿನಲ್ಲಿ ಉತ್ತರ ಹೇಳುವದಾದರೆ– 'ಆನಂದದ ಅನ್ವೇಷಣೆ' ಎಂದು ಹೇಳಬಹುದು. ಪ್ರಾಣಿಗಳನ್ನು ಬೆನ್ನಟ್ಟಿ ಶಿಲಾಯುಧ ದಿಂದ ಕೊಂದು ಹಸಿಯ ಮಾಂಸವನ್ನು ತಿನ್ನುತ್ತಿದ್ದ ಪ್ರಾಚೀನ ಮಾನವನಿಂದ ಆರಂಭಿಸಿ, ಇಂದಿನ ವೈಜ್ಞಾನಿಕ ಸಂಶೋಧನೆ ಗಳ ಸಹಾಯದಿಂದ ಪ್ರಕೃತಿಯ ಮೇಲೆ ಪ್ರಭುತ್ವವನ್ನು ಸ್ಥಾಪಿಸಲು ಯತ್ನಿಸುತ್ತಿರುವ ಆಧುನಿಕ ಮಾನವನ ವರೆಗೂ ಮಾನವ ಜನಾಂಗದ ಇತಿಹಾಸವನ್ನು ನೋಡಿದರೆ ಈ 'ಆನಂದದ ಅನ್ವೇಷಣೆ'ಯು ವಿವಿಧ ರೂಪದಲ್ಲಿ ಮಾನವನ ಪ್ರಗತಿಗೆ ಪ್ರಚೋದಕವಾಗಿರುವದನ್ನು ನಾವು ಕಾಣುತ್ತೇವೆ. ಮಾನವನ

ಅನುಭವ ಬೆಳೆದಹಾಗೆಲ್ಲ ಅವನ ಜೀವನದ ರೀತಿನೀತಿಗಳೂ, ಸನ್ನಿವೇಶ ಆವರಣಗಳೂ ವ್ಯತ್ಯಾಸಗೊಂಡು ಆನಂದದ ಪರಿಧಿಯೂ ವಿಸ್ತಾರಗೊಳ್ಳುತ್ತ ಹೋಗುತ್ತದೆ.

ಆನಂದವೆಂದರೆ ಬಂಧನದಿಂದ ಬಿಡುಗಡೆಯನ್ನು ಪಡೆಯುವದು. ಅದೃಶ್ಯವಾದ ಅನಂತ ಬಂಧನಗಳಿಂದ ಮನುಷ್ಯನ ಜೀವನ ಈ ಲೋಕಕ್ಕೆ ಬಂಧಿತವಾಗಿರುವದನ್ನು ಕಾಣುತ್ತೇವೆ. ಹಸಿವು ತೃಷೆಗಳ ಬಂಧನ, ಕುಸುಮಬಾಣನ ಬಂಧನ, ಬೇರೆ ಬೇರೆ ರೂಪದಲ್ಲಿ ಕಾಡುವ ನೂರಾರು ಸಾಸಿರ ಬಂಧನಗಳು ನಮ್ಮನ್ನು ಬಂಧಿಸಿವೆ. ಇವುಗಳಿಂದ ಬಿಡುಗಡೆಯನ್ನು ಪಡೆಯುಬೇಕೆಂಬುದೇ ನಮ್ಮ ನಿರಂತರ ಸಾಹಸ. ಮಾನವನ ಈ ಬಿಡುಗಡೆಯ ಬಯಕೆಯೇ ಧರ್ಮದ ಉಗಮಕ್ಕೆ ಮೂಲ ಕಾರಣ. ವಿವಿಧ ರೀತಿಯ ಉಪಾಸನೆಗಳ ಹಿಂದಿರುವ ಮೂಲ ಬಯಕೆಯೊಂದೇ, ಅದುವೇ ಸ್ವಾತಂತ್ರ್ಯದ ಅಪೇಕ್ಷೆ. ತಿಳಿದೋ ತಿಳಿಯದೆಯೋ ಪ್ರತಿಯೊಬ್ಬ ಮಾನವನ ಜೀವನವೂ ಸ್ವಾತಂತ್ರ್ಯದ ಕಡೆಗೆ, ಅದರಿಂದ ಲಭಿಸುವ ಆನಂದದ ಕಡೆಗೆ ಸಾಗಿದೆ.

ಈ 'ಬಿಡುಗಡೆಯ ಬಯಕೆ ಮಾನವ ಜನಾಂಗದ ಇತಿಹಾಸದಲ್ಲಿ ಹಲವಾರು ಸನ್ನಿವೇಶಗಳಲ್ಲಿ, ಹಲವಾರು ಮುಖಗಳಿಂದ ವ್ಯಕ್ತವಾಗಿರುವದನ್ನೂ, ವಿಕಾಸಗೊಂಡಿರುವದನ್ನೂ ಕಾಣುತ್ತೇವೆ. ಆದಿಮಾನವನ ಬಿಡುಗಡೆಯ ಬಯಕೆ ಭೀತಿಯಿಂದ ಉದ್ಭವಿಸಿದುದೆಂದು ಕೆಲವರ ಅಭಿಪ್ರಾಯ. ಪ್ರಕೃತಿ

ಒಮ್ಮೊಮ್ಮೆ ಪ್ರಕ್ಷುಬ್ಧವಾಗಿ ತನ್ನ ಉಗ್ರ ಕರಾಳ ಮುಖವನ್ನು ತೋರಿಸಿದಾಗ, ಮೋಡಗಳ ಮಸೆದಾಟದಿಂದ ಆಗಸ ಗರ್ಜಿಸಿ ಬರಸಿಡಿಲು ಅಪ್ಪಳಿಸಿದಾಗ, ಭಯಂಕರವಾದ ಕಾಡುಪ್ರಾಣಿಗಳು ಮುನ್ನುಗ್ಗಿ ನಿಷ್ಕರುಣೆಯಿಂದ ಮನುಷ್ಯನನ್ನು ಆಹುತಿ ತೆಗೆದು ಕೊಳ್ಳುವಾಗ, ಸಾಂಕ್ರಾಮಿಕ ರೋಗಗಳ ಉಗ್ರ ನಖಕ್ಕೆ ತುತ್ತಾಗಿ ಬೆಂಕಿಯಲ್ಲಿ ಬಿದ್ದ ಕೀಟಕಗಳಂತೆ ಮನುಷ್ಯ ಪಟಪಟನೆ ಉದುರಿ ಬಿದ್ದುದನ್ನು ಕಂಡಾಗ ನಿಸ್ಸಹಾಯಕನಾದ ಆದಿ ಮಾನವ. ಇವಕ್ಕೆಲ್ಲಾ ಕಾರಣವಾಗಿರಬಹುದಾದ ಅದೃಶ್ಯ ಶಕ್ತಿಗಳ ಕಡೆಗೆ ಮುಖಮಾಡಿದ. ಇದೇ ಧರ್ಮದ ಅವಿರ್ಭಾವಕ್ಕೆ ಮೂಲಕಾರಣವೆನ್ನಬಹುದು. ಧರ್ಮದ ಹುಟ್ಟಿಗೆ ಭೀತಿ ಎಷ್ಟರ ಮಟ್ಟಿಗೆ ಕಾರಣವೋ, ಸೃಷ್ಟಿಯು ಮಾನವನ ಮನಸ್ಸಿ ನಲ್ಲಿ ಪ್ರಚೋದಿಸಿದ ಕುತೂಹಲವೂ ಅಷ್ಟೇ ಕಾರಣ. ಮೀರ ಲಾರದ ನಿಯಮವೊಂದಕ್ಕೆ ಒಳಪಟ್ಟಂತೆ ಮೂಡಿ ಬೆಳಗಿ ಮರೆ ಯಾಗುವ ರವಿ ಚಂದ್ರಾದಿಗಳು, ಬಾಂದಳದಲ್ಲಿ ಕಿಕ್ಕಿರಿದು ಮಿನು ಗುತ್ತಿರುವ ಲಕ್ಷಾಂತರ ನಕ್ಷತ್ರಗಳು, ಜಲಜಲನೆ ಹರಿಯುವ ತೊರೆಗಳು, ಬೀಸುವ ಗಾಳಿ, ಅರಳುವ ಹೂವು, ಜನಿಸುವ ಶಿಶು, ಮರಣದ ಸಂಕಟ- ಈ ಒಂದೊಂದು ಬಗೆಬಗೆಯ ಕುತೂಹಲವನ್ನು ವಿಚಾರವಂತ ಮಾನವನ ಮನಸ್ಸಿನಲ್ಲಿ ಅಲೆ ಯೆಬ್ಬಿಸುತ್ತಿವೆ. ಒಂದೊಂದನ್ನು ಕಂಡಾಗಲೂ ಇದು ಏಕೆ? ಇದು ಹೇಗೆ? ಎಂಬ ಪ್ರಶ್ನೆಗಳನ್ನು ಆತ ಎದುರಿಸುತ್ತಾನೆ. ಅವನ ಈ ಕುತೂಹಲ ಸೌಂದರ್ಯೋಪಾಸನೆಗಾಗಿ ಪರಿಣಮಿಸಿ ದಾಗ ಈ ಎಲ್ಲ ಬಾಹ್ಯ ಘಟನೆಗಳ ಹಿಂದಿರುವ ಸತ್ಯವನ್ನು

ಕಂಡುಕೊಳ್ಳಲು ಭಾವಲೋಕವನ್ನು ಪ್ರವೇಶಿಸುತ್ತಾನೆ. ಅದು ಸಾಹಿತ್ಯಮಾರ್ಗ. ಆದರೆ ಈ ಕುತೂಹಲ ಕಾರ್ಯಕಾರಣ ಸಂಬಂಧವನ್ನು ಅರಸುವ ತರ್ಕಬದ್ಧ ವಿವೇಚನೆಯಾಗಿ ವಸ್ತು ನಿಷ್ಠಸತ್ಯದ ಆವಿಷ್ಕಾರದಲ್ಲಿ ತೊಡಗಿದಾಗ ಅದು ವಿಜ್ಞಾನ ವಾಗುತ್ತದೆ. ಅಂದರೆ ಸತ್ಯದ ಅನ್ವೇಷಣೆ, ವಸ್ತುನಿಷ್ಠ ವಾದಾಗ ವಿಜ್ಞಾನವಾಗುತ್ತದೆ. ಭಾವನಿಷ್ಠವಾದಾಗ ಸಾಹಿತ್ಯ ವಾಗುತ್ತದೆ. ವಸ್ತು ಭಾವಗಳನ್ನೊಳಗೊಂಡರೂ ಅವುಗಳನ್ನು ಮೀರಿ ಅಲೌಕಿಕ ಶಕ್ತಿಯಂಕಡೆಗೆ ನಮ್ಮ ಅನ್ವೇಷಣೆಯು ದಿಕ್ಕು ತಿರುಗಿದರೆ ಅದು ವ್ಯಾಪಕವಾದ ಅರ್ಥದಲ್ಲಿ ಧರ್ಮದ ವಲಯಕ್ಕೆ ಸೇರುತ್ತದೆ. ಇತಿಹಾಸ ದೃಷ್ಟಿಗೆ ಮಾನವನ ಸಂಸ್ಕೃತಿ ಕಾಣತೊಡಗಿದಂದಿನಿಂದ ಧರ್ಮ ಅವನ ಸಂಗಾತಿಯಾಗಿ ಇದ್ದುದು ಕಾಣುತ್ತದೆ. ಧರ್ಮ ರಹಿತವಾದ ಮಾನವ ಸಮಾಜವನ್ನು ಇತಿಹಾಸ ಇದುವರೆಗೂ ಕಂಡಿಲ್ಲ. ಮಾನವ ಜನಾಂಗ ಬೆಳೆದಹಾಗೆಲ್ಲ ಧರ್ಮದ ಸ್ವರೂಪ ಬದಲಾಗುತ್ತ ಬಂದಿರುವದು ನಿಜ. ಅವನ ಹೊಸ ಹೊಸ ಅನುಭವಗಳಿಂದ ಶ್ರೀಮಂತವಾಗಿ, ಅವನ ಜೀವನವನ್ನು ರೂಪುಗೊಳಿಸುತ್ತ ಪರಿವರ್ತನೆಯು ವಿಕಾಸಮಾರ್ಗದಲ್ಲಿ ನಡೆದು ಬಂದಿದೆ. ಮೊಹೆಂಜದಾರೋ ಹರಪ್ಪ ಸಂಸ್ಕೃತಿಗಳಲ್ಲಿ ಕಂಡುಬರುವ ಧರ್ಮದ ಸ್ವರೂಪ, ವೇದಕಾಲದ ಧರ್ಮದಸ್ವರೂಪ ಒಂದೇ ಆಗಿಲ್ಲ. ವೇದಗಳಲ್ಲಿನ ಧರ್ಮದ ಬೆಳವಣಿಗೆಯಲ್ಲೂ ಅನೇಕ ಹಂತಗಳಿವೆ. ಅನೇಕ ದೇವತೆಗಳ ಆರಾಧನೆ ಒಂದು ಕಡೆಯಲ್ಲಿದ್ದರೆ ಈ ಅನೇಕ ದೇವತೆಗಳಲ್ಲಿ ಒಬ್ಬನೇ ಪ್ರಮುಖನೆಂಬ

ಭಾವನೆ ಇನ್ನೊಂದು–ಕಡೆ ಇದೆ. ಈ ಪ್ರಪಂಚವನ್ನೆಲ್ಲ ಸೃಷ್ಟಿಸಿರುವ ಶಕ್ತಿ ಒಂದೇ; ಅದು ಈ ವಿಶ್ವದಿಂದ ಬೇರೆ ಬೇರೆ ಯಲ್ಲ ಎಂಬ ಭಾವನೆಯೂ ವೇದದಲ್ಲಿ ಕಾಣಿಸಿಗುತ್ತದೆ. ದೈವ ಕಲ್ಪನೆಯಂತೆಯೇ ಉಪಾಸನೆಯ ಮಾರ್ಗದಲ್ಲಿಯೂ ಈ ಮುನ್ನಡೆಯನ್ನು ಕಾಣಬಹುದು. ವೇದಗಳು ಯಜ್ಞಯಾಗಾದಿ ಗಳನ್ನು ಒತ್ತಿಹೇಳಿ ಕರ್ಮಕಾಂಡವನ್ನು ಪ್ರತಿಪಾದಿಸುತ್ತಿದ್ದರೆ ವೇದಗಳ ಅಂತ್ಯಕ್ಕೆ ಬರುವ ವೇಳೆಗೆ ಅಂದರೆ ಉಪನಿಷತ್ತುಗಳಲ್ಲಿ ಜ್ಞಾನಕಾಂಡಕ್ಕೆ ಹೆಚ್ಚು ಪ್ರಾಧಾನ್ಯಸಿಕ್ಕಿರುವದನ್ನು ಕಾಣು–ತ್ತೇವೆ. ಧರ್ಮದ ಬೆಳೆವಣಿಗೆಯ ಈ ಮಾರ್ಗವನ್ನು ನೋಡಿ ದರೆ ಧರ್ಮದಿಂದ ಪೂರ್ಣಪ್ರಯೋಜನವನ್ನು ಪಡೆಯುವ-ದಕ್ಕಾಗಿ ಹೂಡಿದ ವಿವಿಧ ಪ್ರಯೋಗಗಳು ಇವೆಯೆಂಬುದು ಮನದಟ್ಟಾಗುತ್ತದೆ. ಅಲ್ಪದರಿಂದ ಮಾನವನು ಸಂತುಷ್ಟ-ನಾಗಲಾರನು "ನಾಽಲ್ಪೇಸುಖಮಸ್ತಿ" ಎಂದು ಉಪನಿಷತ್ತು ಸಾರಿತು. ಹೆಚ್ಚು ಹೆಚ್ಚಿನ ಸುಖವನ್ನು ಪಡೆದು ಹೆಜ್ಜೆ ಹೆಜ್ಜೆಗೆ ಪರಿಪೂರ್ಣತೆಯ ಕಡೆಗೆ ಮೇಲೇರುವುದೇ ಆತನ ಅಂತರಂಗದ ಆಕಾಂಕ್ಷೆ. ದೈವಿಕವಾದ ಅತೃಪ್ತಿಯೇ ಪೂರ್ಣಧರ್ಮದಕಡೆಗೆ ಕರೆದೊಯ್ಯುತ್ತದೆ. ಆದುದರಿಂದ ಧರ್ಮವೆಂಬುದನ್ನು ಮನುಷ್ಯ, ಅಷ್ಟೇಕೆ ಎಲ್ಲ ಪ್ರಾಣಿಗಳು ಕೂಡ ಒಂದಲ್ಲ ಒಂದು ದಿನ ಮುಟ್ಟಬಹುದಾದ ಅತ್ಯುನ್ನತವಾದ ಎತ್ತರವೆಂದರೆ ಪರಿ-ಪೂರ್ಣತೆಯೇ. ಈ ಜಗತ್ತಿನ ಏರಿಳಿತಗಳ ವಿಷಮತೆಯಲ್ಲಿ ಸಮತೆಯನ್ನೂ ವಿವಿಧತೆಯಲ್ಲಿ ಏಕತೆಯ ಸೂತ್ರವನ್ನೂ ಕಾಣುತ್ತಾ ಮುಂದೆ ನಡೆಯುವ ಜೀವನದ ಅಚಲವಾದ ಆದರ್ಶ

ವೆಂದರೆ ಪೂರ್ಣಾನಂದಸಾಧನೆ. ಪ್ರಾಚೀನ ಮಾನವನ ಗುರಿ ಹೇಗೋ ಹಾಗೆಯೇ ಆಧುನಿಕ ಮಾನವನ ಗುರಿಯೂ ಹೌದು. ಅಂದಿಗೂ ಇಂದಿಗೂ ಮಾನವನ ಬಾಹ್ಯ ಜೀವನದಲ್ಲಿ ಅಜಗಜಾಂತರ ಬದಲಾವಣೆಯಾಗಿದೆ. ಅವನ ಜೀವನದ ಸಮಸ್ಯೆಗಳು ಅಧಿಕವಾಗಿವೆ, ಹೆಚ್ಚು ತೊಡಕಾಗಿವೆ. ಆದರೆ ಅವನ ಜೀವನದ ಕೊನೆಯ ಗುರಿ ಮಾತ್ರ ಒಂದೇ ಆಗಿ ಉಳಿದಿದೆ.

ಮಾನವನ ಅತ್ಯುಚ್ಚವಾದ ಆದರ್ಶ ಅವನು ತಿಳಿದೋ ತಿಳಿಯದೆಯೋ ಹೀಗೆ ತ್ರಿಕಾಲಾಬಾಧಿತವಾಗಿ ಉಳಿದಿರುವದರಿಂದಲೇ ಆ ಆದರ್ಶದ ಕಡೆಗೆ ನಡೆದ ಹೆಜ್ಜೆಗಳೂ ಆ ಆದರ್ಶದ ದರ್ಶನದಿಂದ ದೀಪ್ತವಾದ ಚೇತನಗಳ ಬಾಯಿಂದ ಹೊರ ಹೊಮ್ಮಿದ ಅನುಭಾವದ ನುಡಿಗಳೂ ಚಿರಂತನವಾಗಿವೆ; ನಿತ್ಯ ನೂತನವಾಗಿವೆ. ಉಪನಿಷತ್ ಕಾಲದ ಸಮಾಜ ಇಂದು ನಮ್ಮಲ್ಲಿ ಇಲ್ಲದಿರಬಹುದು; ಭಗವದ್ಗೀತೆಯು ಹುಟ್ಟಿದ ಸನ್ನಿವೇಶ ನಮಗಿಂದು ತೀರ ಅಪರಿಚಿತವಾಗಿರಬಹುದು. ಆದರೂ ಉಪನಿಷತ್ತುಗಳಾಗಲೀ ಭಗವದ್ಗೀತೆಯಾಗಲೀ ಇಂದಿನ ನಮ್ಮ ವೈಜ್ಞಾನಿಕ ಯುಗದ ಸಮಾಜಕ್ಕೂ ಮಾರ್ಗದರ್ಶಕವಾಗಬಲ್ಲವು. ಏಕೆಂದರೆ ಸನಾತನವಾದ ಸತ್ಯವನ್ನು ಅವು ಒಳಗೊಂಡಿವೆ. ಮಾನವನ ಹೋರಾಟದ ಕೊನೆಯ ಗುರಿಯನ್ನು ಅವು ಕುರಿತಿವೆ. “ಯಾವುದರಿಂದ ನಾನು ಅಮೃತನಾಗಲಾರೆನೋ ಅದನ್ನು ಪಡೆದು ನಾನೇನು ಮಾಡಲಿ? ಆದ್ದರಿಂದ ಭಗವಾನ್, ತಾವು ಅರಿತಿರುವ ಅಮೃತತ್ವದ ಸಾಧನವನ್ನೇ ನನಗೆ ಹೇಳಿರಿ” ಎಂದು ಮೈತ್ರೇಯಿ ಅಂದು ಯಾಜ್ಞವಲ್ಕ್ಯರಿಗೆ

ಕೇಳಿದ ಪ್ರಶ್ನೆ ಅಂದಿಗೆ ಮುಗಿಯಲಿಲ್ಲ. ಅದು ಎಂದೆಂದಿಗೂ ಮುಗಿಯದಿರುವ ಪ್ರಶ್ನೆ. ಒಂದಲ್ಲ ಒಂದುದಿನ ಪ್ರತಿಯೊಬ್ಬನೂ ಕೇಳಲೇಬೇಕಾದ ಪ್ರಶ್ನೆ. ಅದನ್ನು ಎದುರಿಸಿ ಉತ್ತರವನ್ನು ಕಂಡುಕೊಂಡಾಗಲೇ ಮನುಷ್ಯ ಜೀವನದ ಸಾರ್ಥಕತೆಯೆಂದು ಉಪನಿಷತ್ತಿನ ಋಷಿಗಳು ಹೇಳುತ್ತಾರೆ. ಭಗವದ್ಗೀತೆಯಂತೂ ಉಪನಿಷತ್ತುಗಳ ಸಾರವೇ ಆಗಿದೆ. ಉಪನಿಷತ್ತುಗಳ ದಿವ್ಯ ದರ್ಶನ ಕೂಡ ಕಾಲಕ್ರಮೇಣ ಮತ ಸಂಪ್ರದಾಯಗಳ ಅಂಧ ಶ್ರದ್ಧೆಯ ಕಾಡಿನಲ್ಲಿ ಸಿಕ್ಕು ಮಸುಳಿಸ ಹತ್ತಿತು. ತಿರುಳನ್ನು ಕಡೆಗಣಿಸಿ ಸಿಪ್ಪೆಯೇ ಸರ್ವಸ್ವವೆಂದು ಭಾವಿಸಿದ ಕಾಲವನ್ನೂ ಕಾಣುತ್ತೇವೆ. ಅದನ್ನು ಪ್ರತಿಭಟಿಸಿ ಧರ್ಮವನ್ನು ಉಜ್ವಲ ಗೊಳಿಸುವ ಪ್ರಯತ್ನಗಳು ಆಗ ನಡೆಯುವದು ಅನಿವಾರ್ಯ ವಾಗಿತ್ತು. ಜೈನ, ಬೌದ್ಧ, ಮತಗಳ ಹುಟ್ಟು ಇಂತಹ ಪ್ರಯತ್ನದಲ್ಲಿ ಪ್ರಮುಖವಾದ ಹೆಜ್ಜೆಗಳು. ಒಂದು ನಿರ್ಧಿಷ್ಟ ಕಾಲದ ವರೆಗೂ ಅವು ತಮ್ಮ ಉದ್ದೇಶವನ್ನು ಪರಿಣಾಮಕಾರಿ ಯಾದ ರೀತಿಯಲ್ಲಿ ಪೂರ್ಣಗೊಳಿಸಿದವು. ಕ್ರಮೇಣ ಅವು ಕೂಡ ಕೇವಲ ಸಂಪ್ರದಾಯದ ಮಾರ್ಗಗಳಾಗಿ ಪರಿಣಮಿಸಿ, ತಮ್ಮ ಶಕ್ತಿಯನ್ನು ಕಳೆದುಕೊಂಡವು. ಈ ಸಂದರ್ಭದಲ್ಲಿಯೇ ಶಂಕರಾಚಾರ್ಯರು ಈ ಮಾರ್ಗಗಳನ್ನು ಪ್ರತಿಭಟಿಸಿ ತಮ್ಮ ವ್ಯಕ್ತಿತ್ವದ ಶಕ್ತಿಯಿಂದ ವೈದಿಕ ಧರ್ಮವನ್ನು ಪುನರುಜ್ಜೀವನ ಗೊಳಿಸಿದರು. ಅನಂತರ ಅನೇಕ ಆಚಾರ್ಯರೂ ಸಾಧಕರೂ, ಸಿದ್ಧರೂ, ಸಂತರೂ ತಮ್ಮ ಜೀವನಗಳಿಂದ ಸಾಧನೆಗಳಿಂದ, ಆಚಾರವಿಚಾರಗಳಿಂದ, ಅನುಭವ ವಾಣಿಗಳಿಂದ, ಉಪನಿಷತ್ತಿನ

ಮಹದ್ದರ್ಶನವನ್ನು ಜೀವಂತವಾಗಿ ಬಳಸಿಕೊಂಡು, ಬೆಳೆಸಿ
ಕೊಂಡುಬಂದರು.

ಹೀಗೆ ನಾವು ಹಂತಹಂತವಾಗಿ ಜೀವಿತದ ಇರುವಿಕೆ
ಯನ್ನು ಅರಿಯುತ್ತ ಹೊರಟಂತೆ ಮನಸ್ಸು ವಿಶಾಲವಾಗುತ್ತ
ಸಾಗುವದು; ಬುದ್ಧಿಶಕ್ತಿ ತೀಕ್ಷ್ಣವಾಗುತ್ತ ಹೋಗುವದು.
ಸಾಧಕನು ಸುಖದ ಅನ್ವೇಷಣೆಯಲ್ಲಿ ತೊಡಗಿದ್ದರೂ ಆ
ಶಿವಾನಂದ ಸುಖದಾಸ್ವಾದನೆಯ ಸುಳಿವು ತೋರಿಬರುವ
ದುಂಟು. ಆದರೆ ಕೆಲವು ಸಮಸ್ಯೆಗಳು ಆಗಾಗ ಜೀವಾತ್ಮನ
ಸ್ಮೃತಿಪಟಲದಲ್ಲಿ ನುಸುಳಿ, ಸುಲಭ ಶಾಂತವಾದ ತತ್ವದರ್ಶನ
ಕ್ಕಾಗಿ ಬೇಕಾದ ಸಾಧನೆಯ ಕಡೆಗೆ ಹೊರಳಿಸುವದು ಸಾಧ್ಯವಿದೆ.
ಜೀವನದ ಮೂಲಭೂತವಾದ ಕೆಲವು ಸಮಸ್ಯೆಗಳು ಎಲ್ಲಾ
ಮತಧರ್ಮಗಳ ಹುಟ್ಟು ಬೆಳವಣಿಗೆಗೆ ಆಧಾರವಾಗುವವು.
ಈ ಸೃಷ್ಟಿ ಹೇಗಾಯಿತು ? ಸೃಷ್ಟಿಕರ್ತನಾರು ? ಸೃಷ್ಟಿಯ
ಸ್ವರೂಪವೇನು ? ಜೀವರಿಗೂ, ಸೃಷ್ಟಿಗೂ, ಸೃಷ್ಟಿಕರ್ತನಿಗೂ
ಸಂಬಂಧವೇನು ? ಜೀವನದ ಉಗಮ ಹೇಗಾಯಿತು? ಜೀವನದ
ಗುರಿಯೇನು ? ಇವೇ ಮೊದಲಾದ ಹಲವಾರು ಪ್ರಶ್ನೆಗಳನ್ನು
ವಿಚಾರವಂತ ಮಾನವನು ಎದುರಿಸಬೇಕಾಗುತ್ತದೆ. ಇವುಗಳ
ವ್ಯವಸ್ಥಿತವಾದ ವಿವೇಚನೆಯೇ ತತ್ವಶಾಸ್ತ್ರದ ತಳಹದಿ ಎನ್ನ
ಬಹುದು. ಈ ತಳಹದಿಯ ಮೇಲೆ ಮತಧರ್ಮಗಳೂ
ಧಾರ್ಮಿಕ ಆಚಾರಗಳೂ ಅನುಭವಗಳೂ ಬೆಳೆದು ರೂಪ-
ಗೊಳ್ಳುತ್ತವೆ.

ಪರಿಪೂರ್ಣಧರ್ಮದ ಸ್ವರೂಪ ಮುಖ್ಯವಾಗಿ ಎರಡು ಅಂಶಗಳನ್ನು ಒಳಗೊಂಡಿರುತ್ತದೆ. ಒಂದು ಅದರ ತಾತ್ವಿಕ ಮುಖ; ಮೂಲಭೂತವಾದ ತತ್ವಗಳ ಜಿಜ್ಞಾಸೆ ಇಲ್ಲಿ ಬರುತ್ತದೆ. ಈ ವಿಚಾರಮಥನದಿಂದ ಕಂಡ ತತ್ವಗಳನ್ನು ಅರಿತು ಅನುಭವಕ್ಕೆ ವೇದ್ಯವಾಗುವಂತೆ ಕೈಕೊಳ್ಳುವ ಮಾರ್ಗವೇ ಧರ್ಮದ ಇನ್ನೊಂದು ಮುಖ. ಒಂದನ್ನು 'ತತ್ವದರ್ಶನ'ವೆಂದು ಕರೆದರೆ ಇನ್ನೊಂದನ್ನು" ತತ್ವಾನುಭವ" ಎಂದು ಕರೆಯಬಹುದು. 'ದರ್ಶನ' ಉದಾತ್ತವಾದಷ್ಟೂ ಅನುಭವ ಉನ್ನತವಾಗುತ್ತದೆ. ಆದುದರಿಂದಲೇ ಮಹಾತ್ಮರ ಸಾಧನೆಯನ್ನೂ, ಅನುಭಾವ ಮಾರ್ಗವನ್ನೂ ನೋಡುವದಕ್ಕೆ ಮೊದಲು ಅವರು ಕೈಕೊಂಡ ತತ್ವದರ್ಶನದ ಸ್ವರೂಪವನ್ನು ಸ್ಥೂಲವಾಗಿಯಾದರೂ ನೋಡ ಬೇಕಾಗುತ್ತದೆ. ಈ ಸೃಷ್ಟಿಯ ವೈಚಿತ್ರ್ಯವನ್ನು ಕಂಡಾಗ ಮತ್ತು ಇದರ ವ್ಯವಸ್ಥೆಯಲ್ಲಿ ಎಲ್ಲೆಲ್ಲಿಯೂ ವ್ಯಾಪ್ತವಾದ ಸರ್ವಶಕ್ತ ನಿಯಮವೊಂದನ್ನು ಕಂಡಾಗ, ಮಾನವನ ಮನಸ್ಸು ಇದಕ್ಕೆ ಕಾರಣವಾಗಿರಬಹುದಾದ ಅದೃಶ್ಯಶಕ್ತಿಯೊಂದರ ಕಲ್ಪನೆಯನ್ನು ಮಾಡಿಕೊಳ್ಳಲೇಬೇಕಾಗುತ್ತದೆ. ಇಂದಿನ ವಿಜ್ಞಾನ ಕೂಡ ಇಂತಹ ಕಲ್ಪನೆಯನ್ನು ನಿರಾಕರಿಸುವ ಸ್ಥಿತಿಗೆ ಬಂದಿಲ್ಲ, ಬರಲು ಸಾಧ್ಯವೂ ಇಲ್ಲ. ವಿಜ್ಞಾನವು ವಸ್ತುಗಳನ್ನು ವಿಭಜಿಸಿ, ಅವುಗಳ-ಸ್ವರೂಪವನ್ನೂ, ಅವುಗಳಿಗಿರುವ ಪರಸ್ಪರ ಸಂಬಂಧವನ್ನೂ, ಸರ್ವಸಮಾನವಾದ ನಿಯಮಗಳನ್ನೂ, ತಿಳಿಯಲು ಯತ್ನಿಸು-ತ್ತದೆಯೇ ಹೊರತು ಆ ವಸ್ತುಗಳ ಸ್ವರೂಪ ಮತ್ತು ಆ ನಿಯಮಗಳು ಏಕೆ ಉಂಟಾದವು ಎಂಬುದನ್ನು ವಿವರಿಸಲಾರದು. ವಿಜ್ಞಾನವು ಎಷ್ಟೇ ಮುಂದುವರಿದು ಅದರ ಕ್ರಿಯೆಗಳು

ಅದ್ಭುತವಾಗಿ ಕಂಡರೂ ಅದು ಆತ್ಮಶಕ್ತಿಯ ದೃಷ್ಟಿಯಲ್ಲಿ, ಅಪೂರ್ಣವೇ ಸರಿ; ಅದೃಶ್ಯಮಯವಾದ ಆ ಪರಾತ್ಪರಶಕ್ತಿ-ಯೊಂದೇ ಪರಿಪೂರ್ಣ. ಅದರ ಅಂತರಾಳದಲ್ಲಿ ಇವೆಲ್ಲವೂ ಅಡಗಿವೆ. ಆ ಆತ್ಮವಸ್ತು ನಿರ್ಗುಣಸ್ವರೂಪ, ಉಳಿದೆಲ್ಲವೂ ಪ್ರಕಟಗೊಂಡ ವಸ್ತುಗಳು; ಅವು ಸಗುಣರೂಪದವು. ಇದನ್ನೇ ಉಪನಿಷತ್ಕಾರರೂ ವೇದಾಂತಿಗಳೂ ತತ್ವದಾರ್ಶನಿಕರೂ ವಿವ-ರಿಸುತ್ತ ಬಂದಿದ್ದಾರೆ.

ಶಾಂತಸಾಗರನೂ ಆನಂದಮಯನೂ ಆದ ಆತ್ಮನಿಂದ ಆಕಾಶೋದಯವಾಯಿತು. ಆ ಆಕಾಶದಿಂದ ವಾಯು ಉತ್ಪನ್ನ ವಾಯಿತು ; ವಾಯುವಿನಿಂದ ಅಗ್ನಿಯು ಜನಿಸಿತು. ಆ ಅಗ್ನಿ ಯಿಂದ ಜಲ ಉತ್ಪನ್ನವಾಯಿತು, ಜಲದಿಂದ ಮೃತ್ತಿಕೆ, ಮೃತ್ತಿಕೆ ಯಿಂದ ತೃಣಧಾನ್ಯಗಳು, ಅವುಗಳ ಸೇವನೆಯಿಂದ ರಕ್ತರೇತ, ಅನಂತರ ತಾಯಿಯ ಗರ್ಭದಲ್ಲಿ ಬೆಳವಣಿಗೆ. ಹೀಗೆ ಜೀವಾತ್ಮನು ನಿರ್ಗುಣಸ್ವರೂಪಾತ್ಮನಿಂದ ಉದಯಿಸಿ ಸಗುಣಾತ್ಮನಾಗಿ ತೋರುತ್ತಿರುತ್ತಾನೆ. ಆದರೆ ಈ ಜೀವಾತ್ಮನೂ ಆ ಪರಮಾತ್ಮನೂ ಒಂದೇ ಬೇರೆಯಲ್ಲ. ಆದುದರಿಂದ ಆತ್ಮವು ಮೂಲತಃ ಚೈತನ್ಯಾತ್ಮಕವಾದುದು; ಆನಂದ ರೂಪಿಯಾದುದು. ಆದರೆ ಅದು ದೇಹದ ಬಂಧನದಲ್ಲಿರುವ ವರೆಗೆ ಅದರ ಚೈತನ್ಯಾ ತ್ಮಕಶಕ್ತಿ, ಬೇರೆ ಬೇರೆ ಭೂಮಿಕೆಗಳಲ್ಲಿ, ಬೇರೆ ಬೇರೆ ಪ್ರಮಾಣ ದಲ್ಲಿ ಮೈದೋರುತ್ತದೆ.

ಒಂದೇ ವಿದ್ಯುಚ್ಛಕ್ತಿಯು ಬೇರೆ ಬೇರೆ ಲೋಹತಂತಿಗಳಲ್ಲಿ ಹಾಯ್ದು ಹೋದಾಗ, ಶಾಖ, ಬೆಳಕು ಮೊದಲಾದ ಬೇರೆ ಬೇರೆ

ರೂಪಗಳನ್ನು ಧರಿಸುವಂತೆ, ಆತ್ಮಶಕ್ತಿ ದೇಹದ ಒಂದೊಂದು ಭೂಮಿಕೆಯಲ್ಲಿಯೂ ಬೇರೆ ಬೇರೆಯಾಗಿ ಕಾಣಿಸಿಕೊಳ್ಳುತ್ತದೆ. "ಈ ಸ್ಥೂಲದೇಹದ ಇಂದ್ರಿಯಗಳೇ ನಾನು" ಎಂಬ ಅನ್ನ ಮಯದ ಸ್ಥಿತಿಯಿಂದ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಕೋಶಗಳನ್ನೇರಿ, ಆನಂದಮಯ ಕೋಶಕ್ಕೆ ಬರುವ ವರೆಗೂ ವಿವಿಧ ಭೂಮಿಕೆಗಳಲ್ಲಿ ಆತ್ಮನು ವಿಕಾಸ ಗೊಳ್ಳುವದನ್ನು ಕಾಣುತ್ತೇವೆ. ಆತ್ಮನ ಸಹಜ ಸ್ವರೂಪವಾದ ಈ ಆನಂದದ ನಿಲುವನ್ನು ಕೈಗೂಡಿಸಿಕೊಡುವುದೇ ಅನುಭಾವದ ಕೊನೆಯ ಹಂತ. ಅಂದರೆ ರಂಗದಲ್ಲಿರುವ ಶಕ್ತಿಗಳನ್ನು ಎಚ್ಚರಗೊಳಿಸಿ, ಆ ಎಚ್ಚರದಿಂದ ತೆರೆದ ಒಳಗಣ್ಣಿನಿಂದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷವಾಗಿ ಸಾಕ್ಷಾತ್ಕರಿಸಿಕೊಳ್ಳುವದನ್ನು ಅನುಭಾವ ಎಂದು ಹೇಳಬಹುದು. ಇದು ಕೇವಲ ಬುದ್ಧಿ ಮನಗಳಿಗೆ ನಿಲುಕದೆ ಅವುಗಳನ್ನು ದಾಟಿದ 'ಅಂತಃಸ್ಫುರಣ' ದಿಂದ ಅನುಭೂತವಾಗುತ್ತದೆ. ಇದನ್ನು ನಿರ್ದೇಶಿಸಲು ಕೆಲವು ವೇಳೆ ಇಂದ್ರಿಯದರ್ಶಿತ ಲೋಕಗಳಾಚೆಗೆ ವ್ಯಾಪಿಸುವ ಕಾಣ್ಕೆ. ಸೃಷ್ಟಿಗೆ ಮೂಲಕಾರಣವಾದ ಸತ್ಯದ ಸ್ವರೂಪವನ್ನು ಪ್ರತ್ಯಕ್ಷ ವಾಗಿ ಕಾಣುವ, ಕೇಳುವ, ಸ್ಪರ್ಶಿಸುವ ಮತ್ತು ವಿವೇಚಿಸುವ ಶಕ್ತಿ– ಎಂದಿದ್ದಾರೆ ಒಂದೆಡೆ ಶ್ರೀ ಅರವಿಂದರು. ಮರ್ತ್ಯ ಪ್ರಜ್ಞೆಯುಳ್ಳ ಸಾಮಾನ್ಯ ಮನಸ್ಸು ಸಾಧನೆಯಲ್ಲಿ ಮುಂದು ವರಿದು ವಿಕಾಸಗೊಳ್ಳುತ್ತ, ಮಹಾಮನಸ್ಸಾಗಿ, ವಿಶ್ವ ಮನಸ್ಸಾಗಿ, ಇದೆಲ್ಲವನ್ನೂ ಮೀರಿದ 'ಅತಿಮಾನಸ ಪ್ರಜ್ಞೆ ಯಾಗಿ' ವಿಶ್ವಾತ್ಮನಲ್ಲಿ ಲೀನಗೊಳ್ಳುವ ಸಾಹಸ ಯಾತ್ರೆಯನ್ನು

'ತಮ್ಮ ದಿವ್ಯಜೀವನ' ಎಂಬ ಗ್ರಂಥದಲ್ಲಿ ಅನುಭಾವಪೂರ್ಣ ವಾಗಿ ಶ್ರೀ ಅರವಿಂದರು ಚಿತ್ರಿಸಿದ್ದನ್ನು ನಾವಿಲ್ಲಿ ಕಾಣಬಹುದು. ಈ ಸೃಷ್ಟಿಯೊಂದು ನಿರಂತರ ಪ್ರವಾಹ. ನಮ್ಮ ಬುದ್ಧಿ ಆ ಪ್ರವಾಹದ ಒಂದು ಕ್ಷಣದ ಪ್ರತಿಯನ್ನು ತೆಗೆದುಕೊಂಡು ಅದರ ಸ್ವರೂಪವನ್ನು ಅರಿಯಲು ಪ್ರಯತ್ನಿಸುತ್ತದೆ. ಆದರೆ ಆ ಪ್ರವಾಹದ ಪೂರ್ಣಸ್ವರೂಪವನ್ನು ತಿಳಿಯಬೇಕಾದರೆ ಅದರ ಚಲನೆಯಲ್ಲಿಯೇ ಭಾಗವಹಿಸಿ, ಅದನ್ನು ಕಂಡುಕೊಳ್ಳುವ ಶಕ್ತಿ ಬೇಕು. ಇಂತಹ ಶಕ್ತಿಯಿಂದ ಸೃಷ್ಟಿಪ್ರವಾಹದ ಬಾಹ್ಯ ಸೌಂದರ್ಯವನ್ನು ಕಂಡೂ, ಅದರ ಹಿಂದಿರಬಹುದಾದ ಸೃಷ್ಟಿ ಕರ್ತನ ಸೌಂದರ್ಯವನ್ನು ಊಹಿಸಿಯೂ ಉಂಟಾದ ಭಾವ-ದೀಪ್ತಿಯಿಂದ ಹುಟ್ಟುವದು ಕಾವ್ಯ. ಈ ಅನುಭವವಿನ್ನೂ ತೀವ್ರತರವಾದಾಗ ಪ್ರವಾಹರೂಪವಾದ ಈ ಪ್ರಪಂಚದ ಚಲನೆ ಯಲ್ಲಿಯೇ ಒಂದು ನಿಶ್ಚಲ ಸತ್ಯವನ್ನು ಸುಸ್ಪಷ್ಟವಾಗಿ ಕಂಡು ತಾನೇ ಅದು ಆಗಿ 'ಪರಿಣಮಿಸುವ' ಮಹಾಪರಿವರ್ತನೆಯೇ ಅನುಭಾವ. ಈ ಅನುಭಾವ ಅದರ ಕೊನೆಯ ನಿಲುವಿನಲ್ಲಿ ಅವರ್ಣನೀಯ. ಶ್ರೀ ರಾಮಕೃಷ್ಣಪರಮಹಂಸರು ಹೇಳು ವಂತೆ ಉಪ್ಪಿನಬೊಂಬೆ ಸಮುದ್ರದ ಆಳವನ್ನು ನೋಡಲು ಹೊರಟಂತೆ ಆಗುತ್ತದೆ. ಮಾತು ಅಲ್ಲಿ ಮೌನವಾಗಿ ಪರಿಣಮಿ ಸುತ್ತದೆ. ಮಾತು ಮನಂಗಳಿಂದ ಅತ್ತತ್ತ ಇರುವ ಜ್ಯೋತಿ ಯದು. ಆದರೂ ಸಾಧಕ ತನ್ನ ಸಾಕ್ಷಾತ್ಕರದ ಭಾವವನ್ನೂ ಆ ಎಡೆಗೆ ನಡೆಯುವ ಮಾರ್ಗದರ್ಶನವನ್ನೂ ಇತರರಿಗೂ ಉಂಟು ಮಾಡಿಕೊಡಲು ಹವಣಿಸುತ್ತಾನೆ. ಆ ಮಾತುಗಳು ಅನುಭಾವದ

ಪೂರ್ಣನಿಲವನ್ನು ವ್ಯಕ್ತಗೊಳಿಸಲಾರವಾದರೂ ಆ ಕಡೆಗೆ ನಡೆಯುವ ಸಾಧಕನಿಗೆ ತೋರುಬೆರಳಾಗಿ ನಿಂತು ಮಾರ್ಗದರ್ಶಕವಾಗುವಷ್ಟರ ಮಟ್ಟಿಗೆ ಜೀವಂತವಾಗಿ ಚಿರಂತನವಾಗುತ್ತವೆ.

ಜೀವನದ ಗುರಿಯನ್ನು ಕುರಿತು ಮನುಷ್ಯ ಆಲೋಚಿಸಲು ತೊಡಗಿದಂದಿನಿಂದಲೇ ಈ ಮಾರ್ಗದ ಅನ್ವೇಷಣೆ ಪ್ರಾರಂಭವಾಯಿತೆಂದು ಹೇಳಬಹುದು. ಸಾಧಕನ ನಿರಂತರ ಸಾಧನೆಯಿಂದ ಆ ಮಾರ್ಗ ಪೂರ್ಣತೆಯನ್ನು ಪಡೆಯಿತು. ಬೇರೆ ಬೇರೆ ದೇಶಗಳಲ್ಲಿ, ಬೇರೆ ಬೇರೆ ಕಾಲಗಳಲ್ಲಿ, ಆಯಾ ಸಾಧಕರು ಜೀವನದ ರಹಸ್ಯವನ್ನರಿಯಲು ಹೋರಾಟವನ್ನು ಕೈಕೊಂಡಿದ್ದು ಎಲ್ಲರೂ ಒಂದೇ ಗುರಿಯ ಕಡೆಗೆ ನಡೆದಿದ್ದಾರೆ. ಅವರ ಹೋರಾಟದ ಸ್ವರೂಪ ಹೊರನೋಟಕ್ಕೆ ಬೇರೆ ಬೇರೆ ರೀತಿಗಳಲ್ಲಿ ಕಂಡರೂ ಕೊನೆಯನ್ನು ಕಂಡುಕೊಂಡವರೆಲ್ಲರೂ ಒಂದೇ ರೀತಿಯ ಅನುಭವವನ್ನು ಪಡೆದಿರುವದು ಕಂಡುಬರುತ್ತದೆ. ಮಾರ್ಗಗಳು ಬೇರೆ ಬೇರೆ ಇದ್ದಂತೆ ತೋರಿದರೂ, ಒಂದೇ ಸಮುದ್ರದ ಕಡೆಗೆ ಸಾಧಕನನ್ನು ನಡಿಸಿಕೊಂಡುಹೋಗಿವೆ. ಬೇರೆ ಬೇರೆ ಕಣಿವೆಗಳಿಂದ ಅವರು ಬಂದರೂ ಏರಬೇಕಾಗಿರುವ ಶಿಖರ ಮಾತ್ರ ಒಂದೇ. ಪಡೆಯಬೇಕಾದ ದೈವೀಶಕ್ತಿಯ ದರ್ಶನ ಮಾತ್ರ ಒಂದೇ. ಆದುದರಿಂದಲೇ ಜಗತ್ತಿನ ಅನುಭಾವಿಗಳೆಲ್ಲರ ಮಾತಿನಲ್ಲಿ ಒಂದೇ ಸತ್ಯದ ಸೂತ್ರವನ್ನು ಕಾಣುತ್ತೇವೆ.

# ೨. ಶ್ರೀ ಚಿದಾನಂದಾವಧೂತರು :

## ಬಾಲ್ಯಜೀವನ

ಪರಶಿವನು ವಿಶ್ವಭರಿತನಾಗಿದ್ದಾನೆ. ಅಣುರೇಣು ತೃಣ ಕಾಷ್ಠಾದಿಗಳಲ್ಲಿ ಪರಿಪೂರ್ಣನಾಗಿದ್ದಾನೆ. ಅವನು ಅವ್ಯಕ್ತನು, ನಿರ್ಗುಣನು, ನಿರಂಜನನು, ಆನಂದಮಯನು. ಹೀಗಿರುವ ಪರ ಶಿವನು ಸಗುಣರೂಪದ ಅನೇಕ ಬ್ರಹ್ಮಾಂಡಗಳನ್ನೇಕೆ ನಿರ್ಮಿಸಿ ದನು ? ಬ್ರಹ್ಮಾಂಡಗಳ ನಿರ್ಮಾಣಕ್ಕೇನು ಕಾರಣ ? ಅದರ ಲ್ಲಿಯೂ ಪರಶಿವನು ಜೀವ ಜಂತುಗಳ ಉದಯ, ತ್ರಿಗುಣಾತ್ಮಕ ಕಾರ್ಯರಚನೆ, ಭಿನ್ನ ಭಿನ್ನ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಭಾವನೆಗಳು, ವಿಪರೀತ ಕಲ್ಪನೆಗಳು, ಜ್ಞಾನ-ಅಜ್ಞಾನಗಳ ಅರಿವು, ಪಾಪಪುಣ್ಯಗಳ ವಿಂಗಡನೆ, ಸ್ವರ್ಗನರಕಗಳ ತಿಳುವಳಿಕೆ, ಸುಖದುಃಖಗಳ ತಾರತಮ್ಯ-ಮುಂತಾದ ಅನೇಕ ದ್ವಂದ್ವಯುಕ್ತ ಜೀವನದ ಉಗಮಕ್ಕೆ ಮನಸ್ಸುಮಾಡಿದ ನೇಕೆ ? ಈ ಗೊಂಬೆಯಾಟವನ್ನಾಡಿಸಲು ಪ್ರಯತ್ನಪಟ್ಟನೇಕೆ ? ಮುಂತಾದ ಪ್ರಶ್ನೆಗಳನ್ನು ಕೇಳುತ್ತದೆ ವಿಜ್ಞಾನಕುಲದ ಮಾನವ ಜನಾಂಗ. ಅವರಿಗೆ ಎಷ್ಟು ಬಗೆಯಿಂದ ಉತ್ತರಿಸಿದರೂ ತೃಪ್ತಿ ಯಿಲ್ಲ. ಇನ್ನೂ ಅನೇಕ ವಿಧವಾಗಿ ಕುತೂಹಲಕ್ಕಾಸ್ಪದವಾದ ವಿಚಾರಧಾರೆ ಪ್ರವಾಹರೂಪದಂತೆ ನಿರರ್ಗಳವಾಗಿ ಬರುತ್ತಲಿದೆ. ಅವರ ಭಾವತೃಪ್ತಿಗೆ ನೆಮ್ಮದಿಯಾದ ಉತ್ತರವಿನ್ನೂ ಲಭ್ಯವಿಲ್ಲ. ಬರೀ ಕಾಲ್ಪನಿಕ ಊಹೆಗಳಷ್ಟೇ ಬರುತ್ತಿವೆ. ಪರಶಿವನು ಇದು

ಲಕ್ಷಣಗಳಿಂದ ಕೂಡಿದ್ದಾನೆ. ಸತ್ತು, ಚಿತ್ತು, ನಿತ್ಯ, ಆನಂದ, ಪರಿಪೂರ್ಣ ಎಂಬುದಾಗಿ. ಇಂದು ನಾವು ವಿಚಾರ ವಿವೇಚನೆಯಿಂದ ಶಿವನಿಗೆ ಸಂಬಂಧಪಟ್ಟ ಆಧಾರ ಗ್ರಂಥಗಳಿಂದೂ ಶಿವಮಯವೆಂದೂ, ಶಿವನ ಉಸಿರೆಂದೂ, ಶಿವನೇ ಹೇಳಿದ ವಿಷಯಾಧರಿತ ಗ್ರಂಥಗಳೆಂದೂ, ಪ್ರತೀತಿ ಇರುವಂಥ ಪ್ರಮಾಣ ಗ್ರಂಥಗಳನ್ನು ಅವಲೋಕಿಸಿದರೆ ಅವುಗಳಲ್ಲಿಯೂ ಬ್ರಹ್ಮಾಂಡಗಳ ರಚನೆಗೆ, ಜೀವೋದಯಕ್ಕೆ ನಿರ್ದಿಷ್ಟವಾದ ಉತ್ತರ ಲಭ್ಯವಿಲ್ಲ. ಅಶುದ್ಧಮಯವಾದ ಜೀವಾತ್ಮನು ಶಿವನಾಗಬೇಕಾದರೆ ಯಾವ ವಿಧಾನವನ್ನು ಅನುಸರಿಸಬೇಕು? ಅವರ ಆಚರಣೆ ಏನು? ಹೀಗೆ ಅನೇಕಾನೇಕ ಪ್ರಶ್ನೆಗಳನ್ನು ವಿವೇಚಿಸುವ ಸಲುವಾಗಿಯೇ ವೇದಗಳು, ಆಗಮಗಳು, ಶೃತಿಗಳು, ಸ್ಮೃತಿಗಳು, ಉಪನಿಷತ್ತುಗಳು, ಅಷ್ಟಾದಶಪುರಾಣಗಳು, ಶಾಸ್ತ್ರಗಳು ಉದಯಿಸಿ, ಶಿವನ ಬಗ್ಗೆ ಅನೇಕ ವಿಧವಾಗಿ ಸ್ತುತಿಸಿದವು. ಆದರೆ ಅವನ ಸ್ತುತಿಯಲ್ಲವೂ ಮುಗ್ಧವಾದವೇ ವಿನಾ ಅವನ ರೂಪಸಾದೃಶ್ಯವನ್ನೂ ಇತಿಮಿತಿಯನ್ನೂ ಸಾದರಪಡಿಸಲಿಲ್ಲ. ಈ ಸಾದೃಶ್ಯತೆಯು ಅಸಾಧ್ಯಮಯವೆಂದೇ ಹೇಳಬಹುದು. ಪರಶಿವನ ಅಂಶೀಭೂತನು ಈ ಜೀವಾತ್ಮನು. ಅಲ್ಪಾಂಶವು ಪೂರ್ಣಾಂಶವನ್ನರಿಯಲು ಅಸಮರ್ಥ. ಅದು ಉಪ್ಪಿನ ಗೊಂಬೆಯು ಸಮುದ್ರದಾಳವನ್ನು ನೋಡಲು ಹೊರಟಂತೆ. ಕೆಂಡದ ಕಿಡಿ ಮಹಾಜ್ವಾಲೆಯಲ್ಲಿ ಪ್ರವೇಶಿಸಿದಂತೆ. ತಮ್ಮ ಅನುಭವಕ್ಕೆ ವೇದ್ಯವಾದುದನ್ನು ಅನೇಕರು ಅನೇಕ ಭಗೆಯಾಗಿ ವಿವರಿಸಿದ್ದಾರೆ. ಆದರೆ ಆನಂದಮಯವಾದ ಶಿವನೇಕೆ ಈ ವಿಶಾಲ

ಬ್ರಹ್ಮಾಂಡ ರಚನೆಗೆ ಮನಸ್ಸುಮಾಡಿದನೆಂಬ ಪ್ರಶ್ನೆಗೆ ನಿರ್ದುಷ್ಟ
ವಾದ ಉತ್ತರ ಕಂಡುಕೊಳ್ಳಲಿಲ್ಲ, ಈ ಪ್ರಶ್ನೆಗೆ ನಿರುತ್ತರವೇ
ಉತ್ತರ. ಪ್ರಮಾಣ ಗ್ರಂಥಗಳು ಒಬ್ಬೊಬ್ಬರ ಒಂದು ವಿಧವಾದ
ಪರಿಪೂರ್ಣವಿಚಾರವೆಂದು ಅರ್ಥಮಾಡಬಹುದು. ಎಲ್ಲರೂ ಎಲ್ಲ
ವಿಧದಲ್ಲಿ ಪರಶಿವನ ಇರುವಿಕೆಯನ್ನೇ ವಿವರಿಸಿ, ಕೊನೆಗೆ ಎಲ್ಲೆ-
ಲ್ಲೆಯೂ ಅವನ ರೂಪಾನಂದವನ್ನೇ ಕಂಡು, ವಿವರವಾಗಿ ಅವನ
ಗುಣಗಾನಮಾಡಿ, ಅವರ್ಣನೀಯವಾದ, ಅನುಪಮವಾದ
ಅವನ ಮಹಿಮೆಯನ್ನು ಅರಿತು, ಕೊನೆಗೆ ಯಾರೂ ಪ್ರಶ್ನಿಸ-
ಬಾರದೆಂಬ ಮನೋಧರ್ಮವನ್ನಿಟ್ಟುಕೊಂಡಂತಿದೆ. ಶಿವನು
ತನ್ನ ವಿನೋದಕ್ಕಾಗಿ ಬ್ರಹ್ಮಾಂಡಗಳ ರಚನೆಯನ್ನು ಮಾಡಿದ;
ತನ್ನ ಲೀಲೆಗಾಗಿ ಜೀವಕೋಟಿಗಳನ್ನು ನಿರ್ಮಿಸಿದ ಎಂದು
ಉತ್ತರಿಸುವರು. ಶಿವನ ಕರ್ತೃತ್ವಶಕ್ತಿಯ ಕಡೆಗೆ ಗಮನಿಸಿ,
ಆಚರಿಸಿ, ಕ್ರಿಯಾಶೀಲರಾಗಿ, ಶಿವಸಾನ್ನಿಧ್ಯ ಪ್ರಾಪ್ತಿ ಮತ್ತು
ಭಾವಾಸಕ್ತರಾಗಿ ಮುಕ್ತಿಯನ್ನು ಪಡೆಯುವದು ಎಲ್ಲ ಶಿವಸ್ವರೂ-
ಪಿಗಳ ಅಂತಿಮ ಗುರಿಯಾಗಿದೆ. ಈ ಗುರಿಯನ್ನು ಪೂರ್ತಿಗೊಳಿಸಿ
ಶಾಂತಿಸಾಮ್ರಾಜ್ಯ ನಿರ್ಮಿಸಲು ಆ ಶಿವಾನಂದನು ಉದಯಿಸಿ
ಕರ್ಮಭೂಮಿಯಲ್ಲಿ ಮಾನವರ ರೂಪದಲ್ಲಿ ಬರುವನು.

ಇಷ್ಟೊಂದು ಮಾನವರ ಏಳ್ಗೆಗಾಗಿ ಪರಶಿವನು ಕರ್ಮ
ಭೂಮಿಯಲ್ಲಿ, ಅದೂ ಮಾನವ ರೂಪದಲ್ಲಿ ಅವತರಿಸಿ ಬರುವ
ಮುಖ್ಯ ಉದ್ದೇಶವೇನಿರಬಹುದು ? ಎಂದು ಅನೇಕರು ಪ್ರಶ್ನಿಸ
ಬಹುದು. ಆ ಪ್ರಶ್ನೆಗೆ ಸಮರ್ಪಕವಾದ ಉತ್ತರವು ದೊರೆ
ಯುವದು ದುರ್ಲಭ. ಕೆಲವರು ಪರಶಿವನು ಕರುಣಾಮಯ-

ನೆಂದು ಹೇಳುವರು. ಕೆಲವರು "ಜೀವಾತ್ಮರು ಕೋಟಲೆಗೊಳ್ಳುವದನ್ನು ನೋಡಿ ಮರುಗಿ ನನ್ನಂಶೀಭೂತರಾದವರು ದುಃಖದಲ್ಲಿ ಮುಳುಗಿ ನನ್ನನ್ನೇ ಮರೆತು ನರಕಯಾತನೆಯನ್ನು ಪಡುವರು. ಅವರನ್ನು ಭವಬಂಧನದಿಂದ ಮುಕ್ತರನ್ನಾಗಿ ಮಾಡಬೇಕೆಂದು ಶಿವನು ಅವತರಿಸುವನು" ಎಂದು ಕಲ್ಪಿಸುವರು. ಇನ್ನು ಕೆಲವರು ಶಿವನು ಅನೇಕ ರೂಪದಿಂದ ಅವತರಿಸುವನೆಂದು ಹೇಳುವರು. ಹೀಗೆ ನಾವು ಅನೇಕ ಬಗೆಯಿಂದ ಕಲ್ಪಿಸುತ್ತ ಹೋದಲ್ಲಿ ಅದಕ್ಕೆ ಒಂದು ನಿರ್ದಿಷ್ಟವಾದ ಉತ್ತರ ದೊರೆಯದು. ಆದರೂ ಮಾನವನ ಸ್ವಭಾವ ಕಂಡದ್ದನ್ನೇ ನಂಬುವದು. ಪರಶಿವನು ಅವ್ಯಕ್ತನು. ಅವನಿಗೆ ಮಾಯೆ ಉಪಾಧಿಯಾಗಲು ವ್ಯಕ್ತವಾಗುವನು. ಅವರ ಕ್ರಿಯೆಯೇ ಈ ವಿರಾಟಸ್ವರೂಪ. ಈ ಬ್ರಹ್ಮಾಂಡಗಳ ರಚನೆಯಾಗಲೀ, ಜೀವಾತ್ಮರ ಉದಯವಾಗಲಿ ಒಂದು ಕ್ರಮವನ್ನರಿತು ನಡೆದು ಬರಬೇಕಾಗುತ್ತಿದೆ. ಆ ಕ್ರಮಕ್ಕೆ ಶಿವನ ಶಾಸನವೆಂದೂ ಎಲ್ಲ ಪ್ರಮಾಣ ಗ್ರಂಥಗಳು ಸಾರಿಹೇಳುತ್ತವೆ. ಆ ಅವ್ಯಕ್ತರೂಪನಾಗಿದ್ದ ಶಿವನಲ್ಲಿ ಶಕ್ತಿಯು ಬೆರೆಯಲು ಕ್ರಿಯಾತ್ಮಕವಾಗಿ ಆ ಪರಮಾತ್ಮನಿಂದ ಆಕಾಶವು ಉದಯಿಸಿತು. ಆಕಾಶದಿಂದ ವಾಯುವಿನ ಉದಯ; ಆ ವಾಯುವಿನಿಂದ ಅಗ್ನಿಯ ಉಗಮ, ಅಗ್ನಿಯಿಂದ ಉದಕ, ಆ ಉದಕದಿಂದ ಮೃತ್ತಿಕೆ. ಅಲ್ಲಿಂದ ತೃಣಧಾನ್ಯಗಳ ಉತ್ಪತ್ತಿ; ನಂತರ ಅವುಗಳ ಸೇವನೆಯಿಂದ ರಸೋತ್ಪತ್ತಿ, ರಕ್ತ; ತದನಂತರ ವೀರ್ಯೋದಯ, ಮುಂದೆ ಜೀವನೋದಯ. ಈ ಕ್ರಮದಲ್ಲಿ ಪಂಚವಿಂಶತಿ ತತ್ವಗಳಿಂದ ವಿಶ್ವಭರಿತ ಜೀವಜಂತುಗಳ

ಉಗಮವೆಂದೂ ಎಲ್ಲ ಆಧ್ಯಾತ್ಮಗ್ರಂಥಗಳ ಸಾರಸಂಗ್ರಹವಾಗಿದೆ. ಇದನ್ನು ಸರ್ವಸಾಮಾನ್ಯ ವಿಷಯವೆಂದು ಅಂಗೀಕರಿಸಿದರೂ ಶಿವನು ಈ ರೀತಿಯಾಗಿ ಏಕೆ ಬರಬೇಕೆಂಬ ಪ್ರಶ್ನೆ ಉಳಿಯುತ್ತದೆ. ಶಾಸನವನ್ನು ಉಲ್ಲಂಘಿಸುವದು ಯಾರ ಧರ್ಮವೂ ಅಲ್ಲ. ಆದುದರಿಂದ ಜೀವಾತ್ಮರ ಉಗಮದಂತೆ ಶಿವನ ಆಗಮನ ಅಷ್ಟೇ ಸತ್ಯವಾದದ್ದು.

ಶಿವನು ಮಾನವರೂಪದಲ್ಲಿಯೇ ಜನಿಸಿ, ಅವರಂತೆ ಬೆಳೆದು ದೊಡ್ಡವನಾಗಿ, ಅವರು ಆಡುವ ಭಾಷೆಯಲ್ಲಿಯೇ ಜ್ಞಾನಸಂಪನ್ನನಾಗಿ, ಕೊನೆಗೆ ಭವಬಂಧನದ ಬಿಡುಗಡೆಯ ಸುಲಭೋಪಾಯವನ್ನು ತಿಳುಹಿಸಿ, ಅವರಿಗೆ ಪ್ರತ್ಯಕ್ಷ ಮಾರ್ಗದರ್ಶನಮಾಡಿ, ಕೊನೆಗೆ ತಾನೂ ಅವರೊಂದಿಗೆ ಆತ್ಮಸಾಗರದಲ್ಲಿ ಸಾಮರಸ್ಯವನ್ನು ಪಡೆದಾಗ, ಶಿವನ ಬಗೆಗೆ ಜನರಿಗೆ ನಂಬಿಗೆ, ವಿಶ್ವಾಸಗಳು ದೃಢವಾಗುವವು. ಆಗ ಎಲ್ಲ ಜೀವಿಗಳು ಅನನ್ಯ ಭಕ್ತಿಯಿಂದ ಅವ್ಯಕ್ತಮಯನಾಗಿರುವ ಶಿವನೇ ವ್ಯಕ್ತ ಸ್ವರೂಪದಲ್ಲಿ ಗುರುವಾಗಿ ಬಂದಿರುವದನ್ನು ನಂಬಿ, ದೇವರೆಂದು ಅವನನ್ನು ಆರಾಧಿಸಿ, ಜೀವನವನ್ನು ಪುನೀತಗೊಳಿಸುವರು. ಅವ್ಯಕ್ತ ಸ್ವರೂಪದಲ್ಲಿದ್ದಾಗ ದೇವನೆನಿಸುವನು. ವ್ಯಕ್ತ ಸ್ವರೂಪದಲ್ಲಿ ಬಂದಾಗ ಗುರುವೆನಿಸುವನು. ದರ್ಶನಕಾರರು ಬದ್ಧ ಜೀವನು ಗಾಢಾಂಧಕಾರದಲ್ಲಿ ಬಳಲುತ್ತಿರುವದನ್ನು ಕಂಡು, ಮರುಗಿ, ಅವನು ಶಿವನನ್ನು ಪಡೆಯುವ ಕ್ರಮಗಳ ಮಾರ್ಗದರ್ಶನದ ಅನಂತವಾದ, ಅಮೂಲ್ಯವಾದ

ಗ್ರಂಥಗಳಂಥ ಜ್ಞಾನ ನಿಧಿಯನ್ನು ಜೀವಾತ್ಮರಿಗೆ ದಯಪಾಲಿಸಿದ್ದರೂ ಅವುಗಳನ್ನರಿತು ಶಿವಸಾನಿಧ್ಯವನ್ನು ಪ್ರಾಪ್ತ ಮಾಡಿಕೊಳ್ಳುವದು ಆಗಲಿಲ್ಲ. ಆಗ ಕರುಣಾಮಯನಾದ ಅವ್ಯಕ್ತ ಸ್ವರೂಪಿ ಶಿವನು ವ್ಯಕ್ತ ಸ್ವರೂಪವನ್ನು ತಾಳಿ ಗುರುರೂಪದ ಚಿದಾತ್ಮ ನರನಾಗಿ ಚತುರ್ಮುಖ ಬ್ರಹ್ಮನಾಗಿ ವೇದಗಳುತ್ಪತ್ತಿ ಮಾಡಿದನು. ಆ ನಂತರ ಅವುಗಳಿಗೆ ವ್ಯಾಸಮಹರ್ಷಿಗಳಾಗಿ ಆ ವೇದಗಳಿಗೆ ಸೂತ್ರಗಳನ್ನು ರಚಿಸಿದನು. ಅವೂ ತಿಳಿಯದಿರಲು ಆ ಸೂತ್ರಗಳಿಗೆ ಅರುವತ್ತುನಾಲ್ಕು ವಿದ್ಯೆಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದು ಶ್ರೀ ಶಂಕರಾಚಾರ್ಯನಾಗಿ ಅದ್ವೈತತತ್ವವೆತ್ತ ಭಾಷ್ಯವನ್ನು ರಚಿಸಿದನು. ನಂತರ ಅದೂ ಜೀವಿಗಳಿಗೆ ಅಸಾಧ್ಯವಾಗಲು, ಆ ಭಾಷ್ಯಗಳಲ್ಲಿ ರತ್ನಪ್ರಾಯವಾಗಿರುವ ಶಿವನ ಸುಲಭ ತತ್ವಗಳನ್ನಾಧರಿಸಿ ಶ್ರೀ ನಿಜಗುಣ ಶಿವಯೋಗಿಗಳು ಆರು ಶಾಸ್ತ್ರಗಳನ್ನು ನಿರ್ಮಿಸಿದರು. ಕೊನೆಗೆ ಅದೂ ಜೀವಾತ್ಮರಿಗೆ ಕಷ್ಟಸಾಧ್ಯವಾಗಲು ಪರಶಿವನು ಶ್ರೀ ಸದ್ಗುರು ಚಿದಾನಂದಾವಧೂತನಾಗಿ ಬಂದು ದೃಢ ಬುದ್ಧಿರೂಪ ಜ್ಞಾನಗ್ರಂಥಗಳನ್ನು ನಿರ್ಮಿಸಿ, ಮುಕ್ತಿಯೆಂಬ ಕ್ಷೀರವನ್ನು ಸ್ವರ್ಣಕಲಶದಲ್ಲಿ ತುಂಬಿ ಮುಮುಕ್ಷುಗಳಿಗೆ ಉಣಬಡಿಸಿದರು.

ಪರಶಿವನು ತಾನು ಜ್ಞಾನಮೂರುತಿಯಾಗಿದ್ದರೂ, ಅದ್ವೈತ ಡಮರುಗವನ್ನು ಬಾರಿಸುತ್ತಿದ್ದರೂ, ಶಿವ-ಶಕ್ತಿಯರ ಪವಿತ್ರದಾಂಪತ್ಯಜೀವನವು ಅಖಿಲ ಪ್ರಪಂಚಕ್ಕೊಂದು ಆದರ್ಶಪ್ರಾಯವಾಗಿದೆ. ಯಾವ ದಂಪತಿಗಳು ಸಂಕಲ್ಪವಾಸನಾರಹಿತರಾಗಿ ನಿಷ್ಕಾಮದಿಂದ ತಾವು ಮಾಡುವ ಕಾರ್ಯವೆಲ್ಲವೂ ಶಿವಾ

ರ್ಪಿತವೆಂದು ಭಾವಿಸಿ ಸನ್ಮಾರ್ಗದಲ್ಲಿ ನಡೆಯುವರೋ ಅಂಥ ಗೃಹಸ್ಥಾಶ್ರಮಿಗಳು ಧನ್ಯರು. ಉಪನಿಷತ್ತುಗಳಲ್ಲಿಯೂ "ಧನ್ಯೋಗೃಹಸ್ಥಾಶ್ರಮಿ" ಎಂದು ಸಾರಿದ್ದು ಇದೇ ಭೂಮಿಕೆಯನ್ನನುಸರಿಸಿ. ಇಂಥ ದಂಪತಿಗಳು ಜಗತ್ತಿಗೆ ಪೂಜ್ಯರು; ಮನುಕುಲಕ್ಕೆ ಆದರ್ಶರು. ಶಿವನಿಗೆ ತುಂಬಾ ಪ್ರಿಯರು, ಪುಣ್ಯವಂತರು, ಇವರು ನೆಲಸಿರುವ ನಿಲಯವೇ ಕೈಲಾಸ. ಯಾವ ದೇಶದಲ್ಲಿ ಆಹಾರ ದೊರೆಯುವದಿಲ್ಲವೋ, ನೀರು ಸಿಗುವದಿಲ್ಲವೋ, ಯಾವ ಸಭೆಯಲ್ಲಿ ಮನ್ನಣೆಯಿಲ್ಲವೋ, ಯಾವಾತನಲ್ಲಿ ವಿದ್ಯೆಯಿಲ್ಲವೋ ಅವನ ಗೆಳೆತನವು ಪುಣ್ಯಕ್ಕೆ ಆಸ್ಪದವಿಲ್ಲದೆ ಧನಲಾಭದೊಳು ಮನುಜರು ಎಂತಾದರೂ ಅಲ್ಲಿ ನಿಲ್ಲಬಾರದೆಂದು ಸುಭಾಷಿತಕಾರರು ಹೇಳಿದ್ದಾರೆ. ಪರಮಾತ್ಮನು ಪವಿತ್ರಭಕ್ತಿಗೂ ನಿರ್ಮಲಹೃದಯಕ್ಕೂ ಮೆಚ್ಚುತ್ತಾನೆ. ಅಂಥ ದಂಪತಿಗಳ ದಿವ್ಯಜೀವನವನ್ನು ವಿಶ್ವಕ್ಕೆ ತೋರಿಸಲು, ಅವರಂತೆ ಉಳಿದ ಜನರೂ ಆಚರಿಸಲೆಂಬ ಸದಿಚ್ಛೆಯಿಂದ ಅಂಥವರ ಉದರದಲ್ಲಿಯೇ ಜನಿಸಿಬರುತ್ತಾನೆ. ಕರ್ಮಭೂಮಿಯಲ್ಲಿ ಜ್ಞಾನಸಂಪನ್ನರಾಗಿ ಸುಲಭದಲ್ಲಿ ಮುಕ್ತಾಂಗನೆಯನ್ನು ಪ್ರಾಪ್ತ ಮಾಡಿಕೊಳ್ಳಲು ಅಸಮರ್ಥರಾದ ಅಜ್ಞಜೀವಿಗಳ ಉದ್ಧಾರಕ್ಕಾಗಿ ಚಿದಾತ್ಮರೂಪವನ್ನು ತಾಳಿ ಸಾತ್ವಿಕವೃತ್ತಿಯಿಂದ ಪುಣ್ಯತಾಣವಾದ ಕರ್ನೂಲ ಜಿಲ್ಲೆಯ ಆದ್ವಾನಿ ತಾಲೂಕಿನ ದೊಡ್ಡ ಹರಿವಾಣದಲ್ಲಿ ಕಡು ಬಡತನವನ್ನಾಧರಿಸಿ 'ಕರಣಂ' ಎಂಬ (ಕುಲಕರ್ಣಿ) ಮನೆತನದಲ್ಲಿ ಬ್ರಾಹ್ಮಣಕುಲದಲ್ಲಿ ಶ್ರೀಲಕ್ಷ್ಮೀಪತಿ, ಶ್ರೀಮತಿ ಅಣ್ಣಮ್ಮ ಎಂಬ ದಂಪತಿಗಳ ಉದರದಿಂದ ಸುಮಾರು

[ಕರ್ನಾಟಕ ಕವಿಚರಿತ್ರೆ ಕಾರರ ನಿರ್ಣಯದ ಪ್ರಕಾರ ನಿರ್ದಿಷ್ಟ ತಾರೀಖು ತಿಂಗಳು ಇನ್ನೂ ಸಿಗುವದು ದುರ್ಲಭ,] ೧೭೫೦ ರಲ್ಲಿ ಶಿವಪಿಂಡವು ಜನಿಸಿತು. ಆಗ ಶಿವನೇ ಉದಯಿಸಿಬಂದುದರಿಂದ ಆ ತಾಯಿ ಅಣ್ಣಮ್ಮಗೆ ಯಾವ ಪ್ರಸವವೇದನೆಯೂ ಆಗದೆ ಜನಿಸಿಬಂದ ಮಗುವನ್ನು ನೋಡಿ, ಆನಂದಭರಿತಳಾದಳು. ಈ ಹಿಂದೆ ತಾನು ನರಸಿಂಹದೇವ, ಚೂಡಣ್ಣರೆಂಬ ಇಬ್ಬರು ಗಂಡು ಮಗುವಿಗೆ ಜನ್ಮಕೊಟ್ಟಿದ್ದರೂ ಈ ಗಾದಷ್ಟು ಸುಖಸಂತೋಷವು ಆಗ್ಗೆ ಆಗಿರಲಿಲ್ಲ. ಈ ನಿರ್ಮಲ ಪ್ರಕಾಶಮಯ ಶಿಶುವಿಗೆ ಹನ್ನೆರಡನೆಯ ದಿನದ ಶುಭಮುಹೂರ್ತದಲ್ಲಿ 'ಝುಂಕಪ್ಪ' ಎಂಬ ನಾಮಕರಣಮಾಡಿದರು. ಈ ಝುಂಕಪ್ಪನು ಬಿದಿಗೆಯ ಚಂದ್ರನಂತೆ ಅಭಿವೃದ್ಧಿಹೊಂದುತ್ತ ಅಭಿಜಾತ ಬಾಲಕನೆನಿಸಿಕೊಂಡನು. ರೂಢಿ, ಸಂಪ್ರದಾಯದಂತೆ ಈ ಝುಂಕಪ್ಪನು ತನ್ನ ಬಾಲ್ಯಾವಸ್ಥೆಯಲ್ಲಿಯೇ ಅಘಟಿತ ಘಟನಾ ಲೀಲೆಗಳನ್ನು ತೋರಿಸಿದನು. ಈ ಬಾಲಕನಿಗೆ ೫ನೆಯ ವರ್ಷದಲ್ಲಿ ಶಿಕ್ಷಣ ಪ್ರಾರಂಭವಾಯಿತು. ಈತನ ಅಣ್ಣನಾದ ಶ್ರೀ ನರಸಿಂಹ ದೇವರು ನಿತ್ಯದಲ್ಲೂ ಮಂತ್ರಪಠನ ಮಾಡುವದನ್ನು ಈತ ಕೇಳುತ್ತಿದ್ದನು. ಅಂದು ಆವನು ಏಕಸಂಧಿಯಾಗಿ ನರಸಿಂಹ ದೇವನು ಹೇಳಿದ ಪದಗಳನ್ನು ಸರಾಗವಾಗಿ ಹಾಡತೊಡಗಿದಾಗ ಈತನ ತಾಯಿಯು ಬೆರೆದಿಡುತ್ತಿದ್ದಳು. ಈ ಮಗುವಿನ ಅರ್ಥಗರ್ಭಿತ ತೊದಲು ನುಡಿಗಳಿಗೆ ತಾಯಿ ಬೆರಗಾಗಿ ಒಳ್ಳೇ ಅಕ್ಕರತೆಯಿಂದ ಬಾಲನನ್ನು ಅಪ್ಪಿಕೊಂಡು ಮುದ್ದಾಡುತ್ತಿದ್ದಳು. ಈ ಬಾಲಲೀಲೆಯು ಎಲ್ಲರನ್ನೂ ಮುಗ್ಧಗೊಳಿ

ಜ್ಞಾನದ ತಿಳಿವಳಿಕೆ, ಧರ್ಮದ ಬಗ್ಗೆ ಕಲ್ಪನೆ, ದೇವತಾದಿಗಳಲ್ಲಿ ಭಯಭಕ್ತಿ, ಆಚಾರವಿಚಾರಗಳ ಮರ್ಮ, ಸ್ವರ್ಗನರಕಗಳ ಭಾವ, ಬರಬೇಕಾದರೆ, ಎಲ್ಲ ಜ್ಞಾನನಿಧಿಯು ಕ್ರಿಯಾತ್ಮಕ ಕರ್ತೃತ್ವಶಕ್ತಿಯು ಅವತಾರವಾಗಬೇಕಾಗುತ್ತದೆ. ಆ ಕಾರಣ ದಿಂದಲೇ ತಾಯಿಗರ್ಭದಿಂದುದಯಿಸುವಾಗಲೇ ನನ್ನ ಕೃಪೆ ಯನ್ನು ನಿನಗಿತ್ತು ಬೆಳಸಿದ್ದೇನೆ. ನೀ ನನ್ನ ಕರುಣೆಯ ಕೂಸಾಗಿ ಬದುಕಿ ಯೋಗಪಾರಂಗತನಾಗಿ, ಚಿದಾನಂದಮಯ ನಾಗಿ, ನನ್ನ ಉಸಿರೇ ಆಗಿ, ಜಗದುದ್ಧಾರ ಮಾಡುವ ಅವ ಧೂತನಾಗಿ ನಿನ್ನ ಜ್ಞಾನರವಿಯಿಂದ ಬೆಳಗೆಂದು ತಿಳಿಸಿದಳು." ಆಗ ಆತನು 'ತಾಯಿ, ನಿನ್ನ ಕೃಪಾಶಿಶುವಾಗಿ, ನಿನ್ನ ಬಿಂಬಾಂಶ ನಾಗಿ ಕಾರ್ಯೋನ್ಮುಖನಾಗುವೆನೆ'ಂದು ತಾಯಿಗೆ ಪ್ರತಿಜ್ಞಾ ಬುದ್ಧಿಯಿಂದ ತಿಳಿಸಿದನು. ತಾಯಿ ಜಗದಂಬೆ ಪ್ರಸನ್ನಳಾಗಿ "ಮಗು ನಿನ್ನ ಸನ್ನಿಧಿಯಲ್ಲಿಯೇ ನಾನಿರುವೆ. ನೆನೆಸಿದಾಗ ಕಾಣಿಸುವೆನು" ಎಂದು ಅಭಯ ವಚನ ನೀಡಿದಳು. ಅಂದಿನಿಂದ ಆ ಬಾಲಕನು ಆತ್ಮದರ್ಶನವನ್ನು ಪಡೆಯುತ್ತ ತನ್ನ ಬಾಲ್ಯ ಜೀವನವನ್ನು ಕಳೆಯುತ್ತ ನಡೆದನು. ಈ ದಿವ್ಯಾನುಭವ ಜನ್ಮ ಕೊಟ್ಟವರಿಗೆ ಹೇಗೆ ಸಾಧ್ಯ? ಬಡತನದ ಬೇಗೆಯಲ್ಲಿ ಬೇಯುತ್ತಿರುವ ತಂದೆತಾಯಿಗಳಿಗೆ ಈ ಮಗುವನ್ನು ಕಂಡಾಗ ಮಾತ್ರ ಯಾವುದೋ ಒಂದು ದಿವ್ಯಾನಂದ ಉಂಟಾಗಿ ಅಲ್ಪ ಕಾಲವಾದರೂ ಜೀವನವನ್ನು ಮರೆಯುತ್ತಿದ್ದರು. ಜ್ಞಾನರವಿ ಯಾಗಿದ್ದರೂ ಬಾಲಕನು ಅದಾವುದನ್ನು ತೋರಗೊಡದೆ ಜೀವನರಥಸಾಗಲು ಪ್ರೇರಣೆಯನ್ನೀಯುತ್ತಿದ್ದನು. ಹೀಗೆ

ಕೆಲವು ಸಂವತ್ಸರಗಳು ಕಳೆದನಂತರ, ಲಕ್ಷ್ಮೀಪತಿಯ ಉಳಿದ ಅಣ್ಣತಮ್ಮಂದಿರು ಯಾವುದೋ ಕಾರಣದಿಂದ ಲಕ್ಷ್ಮೀಪತಿ ಯಿಂದ ಆಸ್ತಿಯ ಪಾಲು ತೆಗೆದುಕೊಂಡು ಬೇರೆ ಬೇರೆಯಾದರು. ಝುಂಕಪ್ಪನ ತಂದೆಯ ಪಾಲಿಗೆ ಮನೆ ಬಾರದಿರಲು, ಕಟ್ಟಿಸುವ ಶಕ್ತಿಯಿಲ್ಲದ್ದಕ್ಕೆ ತೊಂದರೆಪಟ್ಟರು. ಪರಿಶ್ರಮದ ಫಲವಾಗಿ ಅವರಿಗೊಂದು ಭವ್ಯಮನೆಯೇ ದೊರೆಯಿತು. ಅದೊಂದು ದೆವ್ವನ ಮನೆ, ಆದರೂ ತಾಯಿ ಅಣ್ಣಮ್ಮ ಧೈರ್ಯತಂದು ಕೊಂಡು ಪತಿಗೆ ಸಮಾಧಾನ ಹೇಳಿ, ಆ ಮನೆಯಲ್ಲಿಯೇ ವಾಸ ಮಾಡತೊಡಗಿದರು. ಆದರೆ ಆ ಮನೆಯಲ್ಲಿ ಭೂತಗಳಿರಲಿಲ್ಲ. ಸಪ್ತಮಾತೃಕೆಯರ ಮಾತೆಯೇ ವಾಸವಾಗಿದ್ದಳು. ಭಯದ ವಾತಾವರಣವಿದ್ದರೂ ಮಗು ಝುಂಕಪ್ಪನ ದರ್ಶನದಿಂದ ಆ ದಂಪತಿಗಳಿಗೆ ಎಲ್ಲಿಲ್ಲದ ಧೈರ್ಯ. ಆಗಾಗ ಜಗದಂಬೆಯು ಝುಂಕಪ್ಪನಿಗೆ ಪ್ರಸನ್ನಳಾಗಿ ಅವನಿಗೆ ತನ್ನ ಬಗ್ಗೆ ಇರುವ ದೃಢ ನಂಬಿಗೆಯನ್ನು ಬಲಪಡಿಸುತ್ತಿದ್ದಳು. ಆದಲ್ಲದೆ ತಂದೆತಾಯಿ ಗಳಿಂದ ಅವನಿಗೆ ದೊರೆಯುತ್ತಿದ್ದ ತುಂಟತನದ ಶಿಕ್ಷೆಯ ಸಮಯದಲ್ಲಿ, ಅವರ ಸಂಬಂಧಿಕರ ವೇಷಭೂಷ ಧರಿಸಿ ಅನನ್ಯ ರೀತಿಯಿಂದ ಪಾಲನಪೋಷಣ ಮಾಡುತ್ತಿದ್ದಳು. ಇದನ್ನೆಲ್ಲ ತಿಳಿದ ಪರೋಕ್ಷಜ್ಞಾನಿಯಾದ ಝುಂಕಪ್ಪ ಶ್ರೀ ಜಗದಂಬೆಯ ಅನಂತ ದಿವ್ಯಾನಂದರೂಪವನ್ನು ಕಂಡು ಬಾಲಮಂತ್ರವನ್ನು ಪಠಿಸುತ್ತ ತನ್ನ ಬಾಲಲೀಲೆಯನ್ನು ಕಳೆಯುತ್ತಿದ್ದನು. ಶಂಕರಿಯ ಕೃಪೆಪಡೆದು ಅವಳ ಕರುಣೆಯ ಕಂದನಾಗಿ, ಆ ತಾಯಿಯಿಂದ ಅಮೃತ ಪಾನಮಾಡಿ ಅಪೂರ್ವವಾದ ಜ್ಞಾನವ

ಕುಲವಿದೆ ಎಂದರೆ ಯಾರಿಗೆ ತಾನೇ ಅಚ್ಚರಿಯಾಗಲಿಕ್ಕಿಲ್ಲ! ಆದರೆ ತನ್ನ ಲೀಲಾನಂದದಲ್ಲಿ ಕಾಲಕಳೆಯುತ್ತಿರುವಾಗ, ಅಣ್ಣಂದಿರಿಂದ ಈ ರಘುಂಕಪ್ಪ ಹೊಡೆತ ತಿನ್ನುತ್ತಿದ್ದ. ಕೆಲವು ಕಾಲದ ನಂತರ ಈ ಮಗುವಿನ ವಿಚಿತ್ರಮಯವಾದ ಘಟನೆಗಳನ್ನು ನೋಡುತ್ತಿರುವ ತಾಯಿ ಅಣ್ಣಮ್ಮಗೆ ಜ್ಞಾನೋದಯವಾಗಿ, ನಿಮಿತ್ತಮಾತ್ರಕ್ಕೆ ನನ್ನ ಮಗನಿವನು. ಆತನ ಮೇಲೆ ಶ್ರೀದೇವಿಯ ಅನುಗ್ರಹವಿರುವದರಿಂದ ಆ ಜಗನ್ಮಾತೆಯ ಮಗನೇ ಈ ರಘುಂಕಪ್ಪ. ಆತನಿಗೆ ತೊಂದರೆಕೊಡಬಾರದೆಂದು" ಉಳಿದ ತನ್ನ ಇಬ್ಬರು ಮಕ್ಕಳಿಗೆ ಅಜ್ಞಾಪಿಸಿದಳು. ಆದರೆ ಮಗು ರಘುಂಕಪ್ಪನು ಕಿಡಿಗೇಡಿತನದಲ್ಲಿ ಪರಿಣತನಾಗಿದ್ದರೂ ತಾನು ಈ ಹಿಂದೆ ಶ್ರೀದೇವಿಯು ಆದೇಶದಂತೆ ಕಾರ್ಯಪ್ರವೃತ್ತನಾಗಲು ಲೋಕಾರೂಢಿಯಂತೆ ಅಕ್ಷರಾಭ್ಯಾಸಮಾಡಲು ಶಾಲೆಗೆ ಹೋಗುತ್ತಿದ್ದರೂ ಬಹುಸಮಯವನ್ನು ಮಂತ್ರಪಠಣೆಗಾಗಿಯೇ ಮೀಸಲಿಡುತ್ತಿದ್ದನು. ರಘುಂಕಣ್ಣನು ಮೊದಲಿನಿಂದಲೂ ಶಾಲೆಯ ಕಡೆಗೆ ವಿಶೇಷ ಲಕ್ಷ್ಯಗೊಟ್ಟಿದ್ದಿಲ್ಲ. ಶಿಕ್ಷಕರೊಬ್ಬರು ಸ್ವರ್ಗವಾಸಿಗಳಾದ ಮೇಲಂತೂ ಶಾಲೆಗೆ ಹೋಗುವದನ್ನು ನಿಲ್ಲಿಸಿದ್ದನು. ಮುಂದೆ ಯಾರೂ ಅವನಿಗೆ ಶಿಕ್ಷಣ ಕೊಡಲಿಲ್ಲ. ಅವನಲ್ಲಿ ಓದುವ ಚಟವೂ ಇಲ್ಲದಾಯಿತು. ಆದರೆ ಅವನಲ್ಲಿ ಶ್ರೀದೇವಿಯ ಕೃಪಾಕಟಾಕ್ಷವಿದ್ದುದರಿಂದ ಆತನಲ್ಲಿ ಅಸಾಧಾರಣವಾದ ಬುದ್ಧಿಶಕ್ತಿಯು ಬೆಳೆಯತೊಡಗಿತು. ಮುಂದೆ ಅವನ ೮ನೆಯ ವರ್ಷದಲ್ಲಿ, ತಂದೆತಾಯಿಗಳು ತಮ್ಮ ಕುಲದೇವರಾದ ಅಹೋಬಲದ ನರಸಿಂಹದೇವರ ದೇವಸ್ಥಾನದಲ್ಲಿಯೇ ಉಪನಯನಮಾಡಿಸಿ

ದರು. ಝುಂಕಣ್ಣ ೯ನೆಯ ವರ್ಷದವನಾಗುವದರೊಳಗಾಗಿ ವೇದಾಗಮಗಳ, ಶಾಸ್ತ್ರಪುರಾಣಗಳ ಅಧ್ಯಯನಮಾಡಿದನು. ಗಿರಿಜಾಕಲ್ಯಾಣವನ್ನು ಜನಮೆಚ್ಚುಗೆಯಾಗುವಂತೆ ಒಳ್ಳೆಯ ಸುಸ್ವರದಲ್ಲಿ ಹಾಡಿ ಅರ್ಥಮಾಡಿ ಹೇಳತೊಡಗಿದನು. ಶ್ರೀದೇವಿಯ ವಾಣಿ ವೈಖರಿ ಝುಂಕಣ್ಣನ ಮುಖಾಂತರ ಹೊರ ಬಂದು, ಮನುಕುಲಕ್ಕೆ ಪರಮಾನಂದದ ಕಲ್ಪನೆಯನ್ನು ತೋರ್ಪಡಿಸಲು ಪ್ರಾರಂಭಿಸಿತು. ಬಡತನದ ಬಲಿಗೆ ತುತ್ತಾಗಿ ಅವನ ತಂದೆತಾಯಿಗಳು ಗಂಗಾವತಿಯ ನೆರೆಯ ಊರಾದ ಹೆಬ್ಬಾಳದಲ್ಲಿ ಕೆಲವು ಕಾಲವಿದ್ದು ಶ್ರೀದೇವಿ ಸನ್ನಿಧಿಯನ್ನು ಪಡೆದರು. ಅನಾಥಶಿಸುವಾಗಿ ಝುಂಕಣ್ಣ ತನ್ನಸರ್ವಸ್ವವನ್ನೇ ಶ್ರೀದೇವಿಗೆ ಅರ್ಪಿಸಿ ಸದಾಕಾಲವೂ ಮಂತ್ರಪಠನ ಮಾಡುತ್ತ ಸ್ತ್ರೀಯರೆಲ್ಲ ಮಾತೆಯರೆಂದು ನಂಬಿ, ತಾಯಿಯ ಸಗುಣ ಸಾಕ್ಷಾತ್ಕಾರಕ್ಕಾಗಿ ಆ ಸಾಧನೆಗಳನ್ನು ಬೆಳೆಸುತ್ತ ೧೮ ವರ್ಷವಾಗಿದ್ದರೂ ಚಂಚಲತನಕ್ಕೊಳಗಾಗದೇ ಸದಾಚಾರ ಸಂಪನ್ನನಾಗಿ ತನ್ನ ಬಾಲ್ಯಜೀವನವನ್ನು ಪವಿತ್ರ ಪುಣ್ಯಮಾರ್ಗದಲ್ಲಿ ಕಳೆಯುತ್ತ ನಡೆದನು.

## ೩. ಗುರುಸಾನ್ನಿಧ್ಯ ಹಾಗೂ ಆತ್ಮಸಾಕ್ಷಾತ್ಕಾರ

ಪರೋಕ್ಷಜ್ಞಾನಿಯಾದ ಝುಂಕಣ್ಣನು ಆಗಾಗ ಶ್ರೀ ಜಗದಂಬೆಯ ಬಗ್ಗೆ ಆಲೋಚಿಸುತ್ತಿದ್ದನು. ತಾಯಿ ತನಗೇಕೆ ಸ್ಪಷ್ಟವಾಗಿ ತನ್ನ ರೂಪದಲ್ಲಿ ಕಾಣದೆ ಆಗಾಗ ಹೆಬ್ಬಾಳ ಗ್ರಾಮದ ವಾರಕಾರ ಮನೆತನದ ಲಕ್ಷ್ಮಕ್ಕನ ರೂಪದಲ್ಲಿ ತೋರಿ ಉಪದೇಶಿಸುತ್ತಿದ್ದಾಳೆಂದು ಆಲೋಚನೆಗೆ ಒಳಗಾಗುತ್ತಿದ್ದನು. ಇದನ್ನರಿತ ಜಗದಂಬೆ ತೀವ್ರವಾಗಿ ಅವನಿಗೆ ತನ್ನ ಸ್ವರೂಪ ದರ್ಶನ ನೀಡಿ "ಸದಾ ನನ್ನನ್ನೇ ಕಾಣಬೇಕಾದರೆ ಅವನಿಗೆ ತಕ್ಕ ಸದ್ಗುರುವಿನ ಸನ್ನಿಧಾನ ಬೇಕು. ಅದಲ್ಲದೆ ಆ ಸದ್ಗುರುವಿನ ಅನ್ವೇಷಣೆಯಲ್ಲಿಯೇ ಕಾಲಹರಣವಾಗಬಾರದು" ಎಂಬ ಸದಿಚ್ಛೆಯಿಂದ ಆ ಜಗದಂಬೆ "ಆ ಸದ್ಗುರುವಿನ ಪರಿಚಯುವನ್ನು ತಿಳಿಸುತ್ತೇನೆ. ಅಲ್ಲಿಗೆ ಪಯಣ ಮಾಡಿ ಪುನೀತನಾಗು" ಎಂದು ತಿಳಿಸಿದಳು. ಝುಂಕಣ್ಣನು ಸಂತೋಷದಿಂದ "ಆಗಲಿ, ನೀನು ಸಾಮಾನ್ಯಳಾದ ಅಕ್ಕನಲ್ಲ. ಈ ಹಿಂದೆ ಮಂತ್ರೋಪದೇಶ ಮಾಡಿದ ಪರಮ ಪಾವನ ಮೂರ್ತಿ ನೀನು. ಅಮೃತವನ್ನು ಕೈಯಾರೆ ಮಾಡಿ ಉಣಬಡಿಸಿದ ಭಾಗ್ಯನಿಧಿ. ಮಾನವರಿಗೆ ಸಾಧ್ಯವಾದ ಶ್ರೀ ಚಕ್ರಪೀಠದಲಿ ಪ್ರಾದುರ್ಭವಿಸಿದ ಚಿತ್ತಾ-ಳೆಯ ಮೂರ್ತಿಯನ್ನು ಪೂಜಿಸುತ್ತಾ ಜೀವನ ಸಾಗಿಸೆಂದು ಕೊಟ್ಟ ನನ್ನ ಕಲ್ಪವೃಕ್ಷ. ಹೇಳು, ನಿನ್ನ ಹೇಳಿಕೆಯಂತೆ ನಡೆದುಕೊಳ್ಳುವೆ"ನೆಂದು ಒಪ್ಪಿಕೊಂಡನು. ಈಗಲೂ ದೊಡ್ಡ ಹರಿ

ವಾಣದಲ್ಲಿ ಶ್ರೀ ಚಿದಾನಂದಾವಧೂತರ ಸಂಬಂಧಿಕರ ಮನೆಯಲ್ಲಿ ಆ ಹಿತ್ತಾಳೆಯ ಮೂರ್ತಿ ಇರುವದನ್ನೂ ಅವರು ಈಗಲೂ ನಿತ್ಯ ಪೂಜಿಸುವದನ್ನೂ ಪ್ರತ್ಯಕ್ಷ ನೋಡಿ ಬಂದಿದ್ದೇನೆ. ಝುಂಕಣ್ಣನಿಗೆ ಲಕ್ಷ್ಮಕ್ಕನು "ಹೆಚ್ಚು ವೇಳೆಯನ್ನು ಕಳೆಯದೆ ತುಂಗಭದ್ರಾ ನದೀ ತೀರದಲ್ಲಿರುವ ಅಯೋಧ್ಯೆಗೆ ಹೋಗಿ ಅಲ್ಲಿರುವ ಮಹಾಜ್ಞಾನಿಯಾದ ಕೊಂಡಪ್ಪ ಎಂಬ ಸಿದ್ಧಪುರುಷ ನಿಗೆ ಶರಣಾಗತನಾಗಿ ಅವನ ಅನುಗ್ರಹ ಪಡೆದು ನಿನ್ನ ನಿಜ ಸ್ವರೂಪದ ಬಗೆಗೆ ಜ್ಞಾನ ಮಾಡಿಕೊಂಡು ಮುಕ್ತಿಯನ್ನು ಪಡೆ. ಆ ಕೊಂಡಪ್ಪ ಶ್ರೀ ಗುರು ಸರ್ವಶಾಸ್ತ್ರಪುರಾಣಾಗಮ ವೇದಗಳಲ್ಲಿಯೂ, ಯೋಗಾನಂದದಲ್ಲಿಯೂ, ನಿರ್ವಿಕಲ್ಪ ಸಮಾಧಿಯಲ್ಲಿಯೂ ಅವನು ಶಿವಾನಂದನೇ ಆಗಿರುವನು. ಯೋಗಿಗಳಲ್ಲಿ ರಾಜನು, ಆನಂದದಲ್ಲಿ ಶಿವಾನಂದನು, ಏಕೈಕ ನಾದ ಚಿದಾನಂದನೇ ಸಗುಣ ರೂಪಧಾರಣ ಮಾಡಿ 'ಚಿದಾ ನಂದಗುರು' ಎಂಬ ನಾಮಾಭಿಧಾನದಿಂದಿದ್ದೂ 'ಕೊಂಡಪ್ಪ' ನೆಂಬ ನಾಮಾಂಕಿತದಿಂದ ವಿರಾಜಿಸುತ್ತಿದ್ದಾನೆ. ಆತನ ವಿಷಯ ದಲ್ಲಿ ಸಂಶಯ ಪಡಬೇಡ. ಆತನು ಮಹರ್ಷಿಯಲ್ಲದೆ ಸಿದ್ಧ ಸಾಧು–ಸತ್ಪುರುಷನಾಗಿದ್ದಾನೆ. ಆತನ ಅನುಗ್ರಹದಿಂದ ನೀನು ನಿಜವಾಗಿಯೂ ಯೋಗಪುರುಷನಾಗಿ ರಾಜಯೋಗಿಯೆನಿಸುವೆ. ಇದನ್ನು ನಿಜವಾಗಿ ನಂಬು" ಎಂದು ಕಳಕಳಿಯಿಂದ ಉಪದೇಶಿ ಸಿದಳು. ಲಕ್ಷ್ಮಕ್ಕನ ಮುಖದಿಂದ ಬಂದಿರುವ ಅಲೌಕಿಕ ಜ್ಞಾನೋಪದೇಶವನ್ನು ಕೇಳಿ "ನನ್ನಕ್ಕನಿಗೆ ಈ ಗುರು ಪರಿ– ಚಯದ ಸಂಗತಿ ಹೇಗೆ ತಿಳಿಯಿತು ? ಈ ಹಿಂದಿನ ಮಂತ್ರೋಪ

ದೇಶದ ಕಲ್ಪನೆಯು ನೆನಪಿಗೆ ಬಂದು ಶ್ರೀದೇವಿಯು ಅಪ್ರತ್ಯಕ್ಷವಾಗಿ ನನಗೆ ಒಂದಿಲ್ಲೊಂದು ರೀತಿಯಿಂದ ನೆರವಾಗಿ ತೃಪ್ತಿಪಡಿಸಿ ಅನುಗ್ರಹಿಸಿದರೂ ತನ್ನ ನಿಜಸ್ವರೂಪವನ್ನು ಏಕೆ ಮರೆಮಾಡುತ್ತಿರಬಹುದು!" ಎಂಬುದನ್ನು ತಿಳಿದು ಅವಳು ವಿವರಿಸಿದ ವಿಷಯುವನ್ನು ಕುರಿತು ಚರ್ಚಿಸಲು ಝುಂಕಣ್ಣ ಪ್ರಾರಂಭಿಸಿದನು. ಶ್ರೀ ಜಗದಂಬೆಯು ಸೂಕ್ಷ್ಮವಾಗಿ ಈತನು ನನ್ನನ್ನು ಗುರುತಿಸಿದ್ದಾನೆ. ನಾನು ನಿಜವಾದ ಲಕ್ಷ್ಮಕ್ಕನಲ್ಲವೆಂಬುದು ಇವನಿಗೆ ಸ್ಪಷ್ಟವಾಗಿ ತಿಳಿದುಬಂದಿದೆ. ಆದರೂ ತಿಳಿಯದವನಂತೆ ನನ್ನೆದುರಿಗೆ ನಟಿಸುತ್ತಿರುವನು. ಇನ್ನು ಇವನಿಗೆ ನನ್ನ ನಿಜರೂಪವನ್ನು ತೋರಿಸಿ, ಗುರು ಕರುಣೆಯನ್ನು ಸಂಪಾದಿಸುವ ವಿಧಾನವನ್ನು ಹೇಳಿ ಆಶೀರ್ವದಿಸಿಬಿಟ್ಟರಾಯಿತು ಎಂದು ಮನಸ್ಸಿನಲ್ಲಿ ನಿರ್ಧರಿಸಿ "ಮಗೂ ಝುಂಕಣ್ಣಾ, ನೀನು ನನ್ನನ್ನು ಗುರುತಿಸಿರುವೆಯೆಂದು ನಾನು ಚನ್ನಾಗಿ ಬಲ್ಲೆನು. ನಿನ್ನ ನಿಷ್ಕಳಂಕ ಮನಸ್ಸಿಗೆ ನಾನು ಮೆಚ್ಚಿಕೊಂಡಿದ್ದೇನೆ" ಎಂದು ನುಡಿದು ತನ್ನ ನಿಜರೂಪವನ್ನು ಧರಿಸಿ ವಾತ್ಸಲ್ಯದಿಂದ ಆತನ ತಲೆಯ ಮೇಲೆ ಕೈಯಾಡಿಸುತ್ತ "ನೀನು ನುಡಿದಂತೆ ನಾನು ನಿಜವಾಗಿಯೂ ಅಜ್ಞಾನಿಯಲ್ಲ. ನಿನ್ನ ಶೀಲಸೌಜನ್ಯಕ್ಕೆ ಮೆಚ್ಚಿ ಮಂತ್ರೋಪದೇಶ ಮಾಡಿದೆನಷ್ಟೆ. ಆದರೆ ನೀನು ಯೋಗ ಸಿದ್ಧಿಯನ್ನು ಪಡೆಯಬೇಕಾದರೆ ಜ್ಞಾನಮೂರ್ತಿ ಸದ್ಗುರುವಿನ ಅನುಗ್ರಹದ ಅವಶ್ಯಕತೆಯಿದೆ. ನಿನ್ನ ಪೂರ್ವಜನ್ಮದ ತಪ ಯೋಗಸಾಧನೆಯ ಸಂಜ್ಞೆಯಂತೆ **ಶ್ರೀ ಕೊಂಡಪ್ಪನೆಂಬ** ಸತ್ಪುರುಷನು ನಿನಗನುಗುಣವಾದ ಸದ್ಗುರುವಾಗಿದ್ದಾನೆ. ಕಾರಣ

ಆತನಲ್ಲಿ ಯಾವ ಸಂಕೋಚವನ್ನು ತಾರದೆ, ಆ ಗುರುವಿನ ಅನು ಗ್ರಹವನ್ನು ಸಂಪಾದಿಸಿ ಮುಕ್ತಿಯನ್ನು ಪಡೆ" ಎಂದು ನುಡಿದು ಆಶೀರ್ವದಿಸಿದಳು. ಆಗ ರಘುಂಕಣ್ಣ ಆ ಜಗನ್ಮಾತೆಗೆ ನವವಿಧ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ, ಅವಳ ಪಾದ ಗಳಲ್ಲಿ ಮಸ್ತಕವನ್ನಿಟ್ಟು ಭಕ್ತಿಯಿಂದ ವಂದಿಸಿದನು. ಭಕ್ತಿಯ ಆವೇಗದಲ್ಲಿ ಅವನು ಮೈಮರೆತನು. ಆಗ ಶ್ರೀದೇವಿಯು ಅದೃಶ್ಯರೂಪ ತಾಳಿದಳು. ರಘುಂಕಣ್ಣ ಮುಖವೆತ್ತಿ ನೋಡಿ ಜಗನ್ಮಾತೆ ಕಾಣದಿರಲು 'ನನ್ನ ಸರ್ವಸ್ವವೇ ಕಳೆದುಹೋಯಿತು. ಪರಮಪೂಜ್ಯಳಾದ ಶ್ರೀ ಜಗದಂಬಾತಾಯಿಯೇ, ನಿನ್ನ ದಿವ್ಯ ಚರಣಸೇವೆಯಲ್ಲಿ ನನ್ನನ್ನು ಸದಾ ನಿರತನನ್ನಾಗಿ ಮಾಡಬಾರದೇ? ನಿನ್ನನ್ನಗಲಿ ನಾನು ಬಾಳುವದೇ ತೊಂದರೆದಾಯಕ' ಎಂದು ಸ್ವಲ್ಪಸಮಯ ಆಲೋಚಿಸಿ ಆಗಲಿ, ತಾಯಿ; ನಿನ್ನ ಆಜ್ಞೆಯಂತೆ ನಾನು ಮಹಾತ್ಮನಾದ ಶ್ರೀ ಕೊಂಡಪ್ಪ ಸತ್ಪುರುಷನಿಗೆ ಶರ ಣಾಗತನಾಗಿ ಆತನ ಅನುಗ್ರಹ ಪಡೆಯಲು ಈಗಲೇ ಹೊರಡು ತ್ತೇನೆ. ಆ ಸದ್ಗುರುವಿಗೂ ಜಗನ್ಮಾತೆಯಾದ ಶ್ರೀ ಆದಿಶಕ್ತಿಗೂ ಭೇದವನ್ನೆಣಿಸದೆ ನಡೆದುಕೊಳ್ಳುತ್ತೇನೆ. ಈ ಮಾತೆಯ ಕೃಪಾಶೀರ್ವಾದಬಲದಿಂದ ನಾನಿನ್ನು ಈ ಭವಸಾಗರವನ್ನು ನಿಶ್ಚಯವಾಗಿ ದಾಟುವೆನು ಎಂದು ಬಗೆದು ಕಾಲವಿಲಂಬನೆ ಬೇಡವೆಂದು ನಿಶ್ಚಯಿಸಿ, ಮನಸ್ಸಿನಲ್ಲಿ ಜಗನ್ಮಾತೆಯ ನಾಮ ಸ್ಮರಣೆಮಾಡುತ್ತ ಅಯೋಧ್ಯಾನಗರಕ್ಕೆ ಪ್ರಯಣಬೆಳಿಸಿದನು. ಆ ನಗರದಲ್ಲಿ ಶ್ರೀ ಕೊಂಡಪ್ಪನವರ ವಾಸಸ್ಥಳವನ್ನು ಶೋಧ ಮಾಡಿಕೊಂಡು ಹೋದನು. ತೇಜಸ್ವಿಯಾದ ಕೊಂಡಪ್ಪನವರು

ಶಾಂತಚಿತ್ತರಾಗಿ ಕುಳಿತುಕೊಂಡಿದ್ದನು. ಅವನ್ನು ನೋಡಿ ಝುಂಕಣ್ಣನು ನಯ ವಿನಯಪೂರ್ವಕ ನವವಿಧ ಭಕ್ತಿಯಿಂದ ದೀರ್ಘದಂಡ ನಮಸ್ಕಾರಮಾಡಿ, ಸಾಮೀಪ್ಯಕ್ಕೆ ಹೋಗಿ, ಪಾದ ಕಮಲಗಳನ್ನು ಮುಟ್ಟಿ, ಭಕ್ತಿಯಿಂದ ಕಣ್ಣು ಮಸ್ತಕಗಳಿಗೆ ಸ್ಪರ್ಶಮಾಡಿಕೊಂಡು ಭಾವೋದ್ರೇಕದಿಂದ ಗುರುವಿನ ಗುಣಗಾನ ಮಾಡಿದನು. "ದೈವೀಪ್ರೇರಣೆಯಿಂದ ಬಂದ ನನ್ನನ್ನು ತಮ್ಮ ಸನ್ನಿಧಿಯಲ್ಲಿರಿಸಿಕೊಂಡು ನನಗೆ ಸದಾ ರಕ್ಷಾಕವಚವನ್ನು ದಯ ಪಾಲಿಸಿ ಪುನೀತನನ್ನಾಗಿಮಾಡಿ, ತಮ್ಮ ಸ್ವರೂಪದಲ್ಲಿ ನನ್ನನ್ನ-ಡಕಮಾಡಿಕೊಂಡು ಮುಕ್ತಿಯನ್ನು ದಯಪಾಲಿಸು ಗುರುದೇವಾ" ಎಂದು ಝುಂಕಣ್ಣನು ಅನಂತಾನಂತ ಬಗೆಯಲ್ಲಿ ಸದ್ಗುರುವಿನ ಸ್ತೋತ್ರಮಾಡಿದನು. ಕೊನೆಗೆ ಸದ್ಗುರು ಕೊಂಡಪ್ಪನವರು ಸಂತೋಷಗೊಂಡರು.

ಗುರುಗಳು ತಮ್ಮ ದಿವ್ಯಜ್ಞಾನ ದೃಷ್ಟಿಯಿಂದ ಈ ಝುಂಕಣ್ಣನ ಪೂರ್ವದ ಜೀವನ ಸ್ವರೂಪವನ್ನು ಕಂಡುಕೊಂಡು ಆತನ ಯೋಗ್ಯತೆಯನ್ನು ಅಳೆಯಲು ಮನಸ್ಸುಮಾಡಿ, ಆತನನ್ನು ಕುರಿತು, "ನಿನ್ನ ಸುದೈವದ ಮೇಲೆ ಜ್ಞಾನೋದಯದ ಅವಲಂಬನವಿದೆ. ಧರ್ಮವು ಜೀವನದಲ್ಲಿ ಬೆರೆಯದೆ ಜೀವನವು ಸುಂದರವಾಗುವಂತಿಲ್ಲ. ನೀನು ಆತ್ಮಶಕ್ತಿಯ ತೇಜಸ್ಸಿನಿಂದ ಸುಂದರವಾದ ದಿವ್ಯಾತ್ಮಸ್ವರೂಪ ಚಿಚ್ಛಕ್ತಿಯೇ ನೀನಾಗುವಿ; ಪರಬ್ರಹ್ಮಸ್ವರೂಪ ನೀನಾಗುವಿ. ಕಾರಣ ನಿನ್ನ ದೈವದಲ್ಲಿ ಶುಭಾಂಶ ಅಧಿಕವಾಗಿದ್ದರೆ ನಿನ್ನ ಬಯಕೆ ಸಹಜವಾಗಿ ಕೈಗೂಡುವದು. ಇನ್ನು ನೀನು ನಿಶ್ಚಿಂತನಾಗಿದ್ದುಕೊಂಡು

ಅದ್ವೈತವನ್ನು ಸಾಧಿಸಿ ಆತ್ಮಸಾಕ್ಷಾತ್ಕಾರ ಪಡೆಯಲು ಪ್ರಾರಂಭಿಸು" ಎಂದು ತುಂಬುಹೃದಯದಿಂದ ನುಡಿದುಬಿಟ್ಟರು. ಆಗ ಝುಂಕಣ್ಣನಿಗೆ ಅತ್ಯಾನಂದನಾಗಿ ಸದ್ಗುರುವಿನ ಚರಣದಲ್ಲಿ ಮಸ್ತಕವನ್ನಿಟ್ಟು ಭಕ್ತಿಯಿಂದ ನಮಸ್ಕರಿಸಿದನು. ಆಗ ಸದ್ಗುರುಗಳು ತುಂಬುಹೃದಯದಿಂದ ಶುಭಾಶೀರ್ವಾದಗೈದು ಹರಸಿದರು. ಝುಂಕಣ್ಣನು ಸದ್ಗುರುವಿನ ಅನುಮತಿಯಂತೆ ಗುರುಸೇವಾ ಕಾರ್ಯದಲ್ಲಿ ತತ್ಪರನಾಗಿ, ನಯ ವಿನಯ, ಭಯಭಕ್ತಿಗಳಿಂದ ಸದಾ ಗುರು ಸ್ಮರಣೆಯಲ್ಲಿ ಕಾಲಕಳೆಯತೊಡಗಿದನು.

ಝುಂಕಣ್ಣನು ಸದ್ಗುರುವಿಗೆ ತನುಮನಗಳನ್ನರ್ಪಿಸಿ, ನಯ ವಿನಯ ಭಯಭಕ್ತಿಯಿಂದ ಗುರು ಕಾರ್ಯಗಳಲ್ಲಿ ಆಸಕ್ತಿ ವಹಿಸಿ, ಸ್ವಾರ್ಥಪರ ಪ್ರಾಪಂಚಿಕ ವಿಷಯವನ್ನು ಮರೆತು ಸದಾ ಗುರುಸೇವೆಯಲ್ಲಿಯೇ ಮಗ್ನನಾಗಿ, ಗುರುಮನೆಯ ಅಂಗಣವನ್ನು ಸ್ವಚ್ಛವಾಗಿಸಿ, ಗೋವುಗಳ ದೊಡ್ಡಿಯನ್ನು ನಿರ್ಮಲಗೊಳಿಸಿ, ಮನೆಯ ಕೆಲಸಗಳಲ್ಲಿಯೂ ಭಾಗಿಯಾಗಿ, ಅಂದವಾಗಿ ಅಡುಗೆಯ ಮನೆಯನ್ನು ಸ್ವಚ್ಛಮಾಡಿಡುತ್ತಿದ್ದನು. ಗುರುವಿನ ಬಟ್ಟೆಗಳನ್ನು ತೊಳೆಯುತ್ತಿದ್ದನು. ಗುರುವಿನ ಆಶ್ರಮದಲ್ಲಿ ಸದ್ಭಕ್ತರು ಬೇಸೆಯಿಂದ ಮಲಗಿಕೊಂಡಾಗ ಅವರ ಉಪಚಾರವನ್ನೂ ಬಹುಭಕ್ತಿಯಿಂದ ಮಾಡುತ್ತಿದ್ದನು. ಪ್ರಾತಃಕಾಲದಲ್ಲೆದ್ದು ತನ್ನ ಜಪತಪಾದಿಗಳದ್ದು ಮುಗಿಸಿಕೊಂಡು ಗುರುವಿನ ಅಪ್ಪಣೆಯ ಮಾರ್ಗವನ್ನು ನಿರೀಕ್ಷಿಸುತ್ತ ಯಾವ ಕಾಲಕ್ಕೆ ಏನಪ್ಪಣೆಯಾಗುವುದೋ ಎಂದು ನಿಷ್ಠೆಯಿಂದ ಕಾದು ಕುಳಿತುಕೊಂಡಿರುತ್ತಿದ್ದನು. ಊರಲ್ಲಿ ಅಲೆದು ಮಾಧುಕರಿಯನ್ನು

ಬೇಡಿತೆಂದು ಅದೇ ಗುರುಪ್ರಸಾದವೆಂದು ಆನಂದದಿಂದ ಸೇವಿಸಿ. ಗುರುಸೇವಾಕಾರ್ಯದಲ್ಲಿ ತತ್ಪರನಾಗುತ್ತಿದ್ದನು. ಗುರುಗಳು ಇದನ್ನು ನೋಡಿ ಭಿಕ್ಷಾಟನವು ಬೇಡ; ದೇವರು ದಯಪಾಲಿಸಿದ್ದ ರಲ್ಲಿಯೇ ಬದುಕಿರೋಣ, ಇಂದಿನಿಂದ ನಿನ್ನ ಪ್ರಸಾದವು ನಮ್ಮ ಸನ್ನಿಧಿಯಲ್ಲಿಯೇ ಸಾಗಲೆಂದಾಗ ಒಪ್ಪಿ, ಎಡಬಿಡದೆ ಗುರುವಿನ ಆಶ್ರಯದಲ್ಲಿ ಹಗಲಿರುಳು ಕೆಲಸಮಾಡುತ್ತ ಸದಾವಕಾಲದಲ್ಲಿ ಹಸನ್ಮುಖಿಯಾಗಿಯೇ ಇರುತ್ತಿದ್ದನು. ಎಂದೂ ಅಸಂತೋಷ ವನ್ನು ವ್ಯಕ್ತಪಡಿಸಲಿಲ್ಲ. ಭಕ್ತನ ಈ ಶ್ರದ್ಧೆಯನ್ನು ಕಂಡು ಮೆಚ್ಚಿ, ಸದ್ಗುರು ಶ್ರೀ ಕೊಂಡಪ್ಪನವರು ಒಳ್ಳೆಯ ಸಂತೋಷ ದಿಂದ ಝುಂಕಣ್ಣನಿಗೆ "ಚಿದಾನಂದ"ನೆಂದು ಕರೆದರು. ಅಂದಿ ನಿಂದ ಇವನಿಗೆ ಚಿದಾನಂದ ಎಂಬ ಹೆಸರೇ ರೂಢವಾಯಿತು. ಝುಂಕಣ್ಣನು ತನ್ನ ಬರಹದಲ್ಲಿ ಪದ್ಯರಚನೆಯಲ್ಲಿ ಸದ್ಗುರುವಿನ ಅನುಗ್ರಹದಿಂದ ಪ್ರಾಪ್ತವಾಗಿರುವ 'ಚಿದಾನಂದ' ವೆಂಬ ಕವಿ ಮುದ್ರಿಕೆಯನ್ನೇ ಇಡುತ್ತ, ಸಾಹಿತ್ಯಕೃತಿಗಳನ್ನು ನಿರ್ಮಿಸ ತೊಡಗಿದನು.

ಸದ್ಗುರುವಿನ ವಾಣಿಯಿಂದ ಉಚ್ಚರಿಸಲ್ಪಟ್ಟ ನಾಮ ವನ್ನೇ ಸದಾಚಾರಿಯಾದವರನ್ನು ಬಹುವಚನದಲ್ಲಿ ಕರೆಯುವ ಸಂಪ್ರದಾಯದಂತೆ ಚಿದಾನಂದರು ಎಂಬ ಗೌರವಸೂಚಕ ಪದ ಗಳಿಂದ ಭಕ್ತವೃಂದ ಕರೆಯಲು ಪ್ರಾರಂಭಿಸಿತು. ಗುರುಗಳಾದ ಶ್ರೀ ಕೊಂಡಪ್ಪನವರು ವಾಡಿಕೆಯಂತೆಯೇ ಭಾವಸಮಾಧಿಯಲ್ಲಿ ನಿರತರಾಗಿ ಮೌನದಿಂದ ಕುಳಿತುಕೊಂಡವರು. ಒಂದು ದಿನ ಭಾವಸಮಾಧಿಯಿಂದ ಉತ್ಥಾನರಾಗಿ ಎದುರಿನಲ್ಲಿ ನಿಂತುಕೊಂಡು

ಚಿದಾನಂದರನ್ನು ಕರೆದು ಮಗು ಚಿದಾನಂದನೇ; ನೀನು ನನ್ನ ಬಳಿಯಲ್ಲಿದ್ದು ಕಾಲಹರಣ ಮಾಡುವದಕ್ಕಿಂತ ಕೆಲವು ಸಮಯ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿಕೊಂಡು ಬರುವದು ಒಳ್ಳೆಯ ದೆಂದು ಆಜ್ಞಾಪಿಸಿದರು. ಶ್ರೀ ಸದ್ಗುರುಗಳ ಆಜ್ಞೆಯು ವೇದ ವಾಕ್ಯವೆಂದು ನಿರ್ಧರಿಸಿ. ಗುರುಗಳು ಪರಮಾತ್ಮನ ಬಹು ವಿಧ ರೂಪಲೀಲೆಗಳನ್ನು ನೋಡಿಬರಲು ಅವಕಾಶವನ್ನಿತ್ತರೆಂದು ಆನಂದಿತರಾಗಿ, ಗುರುಗಳಿಗೆ ದಂಡವತ್ಪ್ರಣಾಮಗೈದು ಗುರು ಚರಣಧೂಳಿಯನ್ನು ನಯನಗಳಿಗೆ ಹಾಗೂ ಶರೀರದಲ್ಲೆಲ್ಲಾ ತಳೆದುಕೊಂಡುದಲ್ಲದೆ ಅವರ ಪಾದಧೂಳಿಯನ್ನು ಮತ್ತೊಮ್ಮೆ ಮಸ್ತಕದ ಮೇಲೆ ಲೇಪಿಸಿಕೊಂಡು ತೀರ್ಥಯಾತ್ರೆಗಾಗಿ ಪ್ರಯಾಣ ಬೆಳೆಸಲು ಗುರುಗಳ ಆಶೀರ್ವಾದ ಪಡೆದುಕೊಂಡು ಹೊರಟರು. ಜಗನ್ಮಾತೆಯ ಉಪಾಸಕರಾದ ಇವರು ಪ್ರಾರಂಭ ದಲ್ಲಿ 'ಜೋಗಳಾಂಬಾ'ದೇವಿಯ ದರ್ಶನಾಶೀರ್ವಾದ ಪಡೆದು ಕೊಂಡು ಅಲ್ಲಂಪುರಿಗೆ ಪ್ರಯಾಣ ಬೆಳಿಸಿದರು. ಮುಂದೆ ಶ್ರೀಶೈಲಕ್ಕೂ, ಮಹಾನಂದಿಗೂ, ಅಹೋಬಲ, ಭದ್ರಾಚಲ, ವಿಮಲವಾಡ, ಕಾಯಕೋಟೆ, ವೆಂಕಟರಮಣಗಿರಿ, ಕಾಳಹಸ್ತಿ, ಕಂಚಿ, ಬೆಜ್ಜವಾಡ, ಶಂಖಮುಖಿ, ಕುಂಭಕೋಣ, ಅರುಣಾ- ಚಲ, ರಾಮೇಶ್ವರ, ಮಧುರಾ, ಅಳಘಡಿ, ತ್ರಿಚನಾಪಲ್ಲಿ, ಉಡುಪಿ, ಗೋಕರ್ಣ, ಕೊಲ್ಲೂರು, ಶೃಂಗೇರಿ, ಪಂಢರಪುರ, ಕೊಲ್ಹಾಪುರ, ಮೈಲಾರ, ಸವದತ್ತಿ, ಅಂಭಣ್ಣಘಟ್ಟ, ಉಜ್ಜಯನಿ, ಚಿತ್ರಕೂಟ, ಪ್ರಯಾಗ, ಕಾಶಿ, ಅಯೋಧ್ಯಾ, ಹರಿದ್ವಾರ, ಪರಳಿ, ಗಯಾ, ಜಗನ್ನಾಥ, ಗೋದಾವರಿ,

(ಸಪ್ತ) ಪಾಲಗೊಂಡ, ತುಲಸಿಗ್ರಾಮ, ಉನಕಿಗ್ರಾಮ, ಸಿಂಹಾದ್ರಿ, ಪಾಹುರಮ್, ಮುಂತಾದ ಪವಿತ್ರವಾದ ಎಲ್ಲ ಕ್ಷೇತ್ರಗಳಲ್ಲಿಯ ದೇವರ ದರ್ಶನಾಶೀರ್ವಾದಗಳನ್ನು ಪಡೆದು ಕೊಂಡು ಕೊನೆಗೆ ತುಳಜಾಪುರಕ್ಕೆ ಬಂದು, ಅಲ್ಲಿ ಒಳ್ಳೇ ನಿಷ್ಠೆ ಯಿಂದ ಶ್ರೀ ತುಳಜಾಭವಾನಿಯ ದರ್ಶನಪಡೆದುಕೊಂಡು ನಮಸ್ಕರಿಸಿ, ಅಲ್ಲಿಯೇ ಸಮೀಪದಲ್ಲಿರುವ ಭೀಮರತಿ ನದಿಗೆ ಬಂದರು. ನದಿಯಂ ದಂಡಿಯ ಮೇಲಿರುವ ಶ್ರೀಚಂದಲಾ ದೇವಿಯ ದೇವಾಲಯಕ್ಕೆ ಹೋಗಿ, ಭಯಭಕ್ತಿಯಿಂದ ನಮಸ್ಕಾರ ಮಾಡಿ, ಸಮೀಪದಲ್ಲಿರುವ ಪಂಪಾಕ್ಷೇತ್ರಕ್ಕೆ ಬಂದು ತಲುಪಿದರು. ಅಲ್ಲಿ ಇವರ ಗುರುಗಳಾದ ಶ್ರೀ ಕೊಂಡಪ್ಪನವರು ಈ ಮೊದಲೇ ಬಂದಿದ್ದರು. ಚಿದಾನಂದರು ತಮ್ಮ ಗುರು ಗಳನ್ನು ಕಂಡು ಅತ್ಯಾನಂದದಿಂದ ಭಕ್ತಿಯ ಆವೇಶದಿಂದ ದಂಡವತ್ ಪ್ರಣಾಮಗೈದು ಮೈಮರೆತುಬಿಟ್ಟರು, ಶ್ರೀ ಗುರು ಗಳು ಇವರನ್ನು ಎಬ್ಬಿಸಿ ಆನಂದಾವೇಗದಿಂದ ಬಿಗಿದಪ್ಪಿ ಕೊಂಡು ಮುದ್ದಾಡಿದರು ಮತ್ತು ವಾತ್ಸಲ್ಯದಿಂದ "ಸರ್ವ ಕ್ಷೇತ್ರಗಳ ದರ್ಶನ ತೆಗೆದುಕೊಂಡೆಯಾ ?" ಎಂದು ಕೇಳಿದರು. ಆದಕ್ಕೆ ಶ್ರೀ ಚಿದಾನಂದರು ಭಕ್ತಿಯಿಂದ ವಿನಯವಾಣಿಯಲ್ಲಿ, ದರ್ಶನ ತೆಗೆದುಕೊಂಡ ಪುಣ್ಯಕ್ಷೇತ್ರಗಳ ಹೆಸರುಗಳನ್ನೂ, ಆ ಕ್ಷೇತ್ರಗಳ ಮಹಿಮೆಯನ್ನೂ, ಆಶ್ಚರ್ಯಕರ ಘಟನೆಗಳನ್ನೂ, ಚಾಚೂತಪ್ಪದಂತೆ ಉತ್ಸಾಹದಿಂದ ಹೇಳಿದರು. ಇದನ್ನೆಲ್ಲ ಕೇಳಿ ಶ್ರೀ ಕೊಂಡಪ್ಪನವರಿಗೆ ತುಂಬಾ ಸಂತೋಷವಾಯಿತು. ಆ ಮೇಲೆ ತಾವಿಬ್ಬರೂ ಜೊತೆಯಾಗಿಯೇ ಪ್ರಯಾಣ ಬೆಳೆ

ಯಿಸಿದರೂ ಮೊಟ್ಟಮೊದಲು ಅಯೋಧ್ಯೆಯ ಗ್ರಾಮದ ಕಡೆಗೆ ಹೋದರು. ಈ ಸಮಾಚಾರವು ಸ್ವಲ್ಪ ಸಮಯದಲ್ಲಿಯೇ ಆ ಗ್ರಾಮದೆಲ್ಲೆಲ್ಲ ಹರಡಿಬಿಟ್ಟಿತು. ಇವರು ಬಂದ ವಾರ್ತೆಯಿಂದ ಭಕ್ತವೃಂದ ಗುಂಪುಗೂಡಿಬಂದು ಅವರ ದರ್ಶನಾಶೀರ್ವಾದ ಗಳನ್ನು ಪಡೆದು, ಪುಣ್ಯತೀರ್ಥಕ್ಷೇತ್ರಗಳ ಮಹಿಮೆಯನ್ನು ಅವರ ಮುಖದಿಂದ ಕೇಳಿಕೊಂಡು ಅತ್ಯಾನಂದಭರಿತರಾದರು.

ಹೀಗೆ ಶ್ರೀ ಚಿದಾನಂದರು ಸದ್ಗುರು ಸೇವಾಸಕ್ತರಾಗಿದ್ದ ರಲ್ಲದೆ ಗುರುವಿನ ಅಪ್ಪಣೆಯಂತೆ ಅಯೋಧ್ಯಾನಗರದಲ್ಲಿ ಭಜನೆ, ಕೀರ್ತನೆ, ಶಾಸ್ತ್ರ, ಮುಂತಾದವುಗಳನ್ನು ಸಾಗಿಸುತ್ತಿದ್ದರು. ಆ ನಗರದಲ್ಲಿ ಒಳ್ಳೇ ವಿಶಾಲವಾದ ವಿರೂಪಾಕ್ಷೇಶ್ವರನ ದೇವಾಲ ಯದಲ್ಲಿ ಇವರ ಶಾಸ್ತ್ರಪುರಾಣಗಳ ಪ್ರವಚನ ನಡೆಯುತ್ತಿತ್ತು. ಗುರುವಿನ ಸಮ್ಮತಿಯಾದ ಶಾಸ್ತ್ರವಿಷಯವನ್ನೇ ಭಕ್ತಜನರಿಗೆ ಉಪದೇಶಿಸುತ್ತಿದ್ದರು. ಶ್ರೀ ಚಿದಾನಂದರ ಅಮೃತವಾಣಿಗೆ ಮೆಚ್ಚಿ ಆ ನಗರದ ಅದೆಷ್ಟೋ ಭಕ್ತರು ತಂಡೋಪತಂಡವಾಗಿ ಬಂದು, ಭಕ್ತಿಯಿಂದ ನಮಸ್ಕರಿಸಿ ಕುಳಿತುಕೊಳ್ಳುತ್ತಿದ್ದರು. ಪ್ರತಿದಿನ ಆ ದೇವಾಲಯದ ಅರ್ಚಕರೂ ಪ್ರತಿಷ್ಠಿತ ಭಕ್ತಜನರೂ ಶ್ರೀ ಚಿದಾನಂದರಿಗೆ ಕೀರ್ತನೆ, ಪುರಾಣ ಹೇಳುತ್ತಿರುವಾಗ ಪುಷ್ಪಹಾರಗಳನ್ನು ಹಾಕಿ ಸತ್ಕರಿಸುತ್ತಿದ್ದರು. ಶ್ರೀ ಚಿದಾ ನಂದರ ಅನುಭವದ ನುಡಿಗಳು ಸಕಲ ಪಂಥಗಳ ಜನರನ್ನು ಮುಗ್ಧಗೊಳಿಸುತ್ತಿದ್ದವು. ಅವರು ಉಪನ್ಯಾಸ ಮಾಡುತ್ತಿರು ವಾಗ ಎಲ್ಲ ಜನಾಂಗದ ಜನರು ಆನಂದಪರವಶರಾಗಿ, "ಈ ಚಿದಾನಂದರು ಶಿವಸ್ವರೂಪಿಗಳಾಗಿದ್ದಾರೆ. ಸಾಕ್ಷಾತ್ ಶಂಕರನೇ

ಅವತರಿಸಿ ಬಂದಂತಾಗಿದೆ." ಎಂದು ಕೊಂಡಾಡುತ್ತಿದ್ದರು. ಶ್ರೀ ಚಿದಾನಂದರು ಕೇವಲ ಉಪನ್ಯಾಸಮಾಡುತ್ತಿದ್ದರಷ್ಟೇ ಅಲ್ಲ; ಆಗಾಗ್ಗೆ ಒಳ್ಳೇ ತತ್ವಪದಗಳನ್ನು ರಚಿಸಿ ಸ್ವತಃ ರಾಗ ಬದ್ಧವಾಗಿ ಹಾಡುತ್ತಿದ್ದರು. ಅವರ ಸಂಗೀತಸುಧೆಗೆ ಬಹಳ ಜನರು ಮರುಳಾಗಿ ಅವರ ಕಂಠ ಮಾಧುರ್ಯದ ಸವಿಯನ್ನು ಸವಿಯುತ್ತ ಮೈಮರೆಯುತ್ತಿದ್ದರು. ಶ್ರೀ ಚಿದಾನಂದರು ಈ ಸಮಯದಲ್ಲಿ ಅನೇಕ ತೊಂದರೆಗಳನ್ನು ಪಟ್ಟು ಕಾಯವು ಕ್ಷೀಣ ವಾಗಿದ್ದರೂ ಅದೊಂದು ರೀತಿಯ ಗುರುಪ್ರಸಾದವೆಂದು ಭಾವಿಸಿ, ಸಂತೋಷದಿಂದ ಇರುತ್ತಿದ್ದರು. ಸದ್ವಂಶವು ಆತ್ಮ ಶಕ್ತಿಯನ್ನು ಪರಮಾವಧಿಗೇರಿಸುವ ಸಾಮರ್ಥ್ಯವುಳ್ಳದಾಗಿದೆ. ಅಂತೆಯೇ ಶ್ರೀ ಚಿದಾನಂದರು ತಮ್ಮ ವಂಶವೃಕ್ಷದ ಸಾಮ ರ್ಥ್ಯಕ್ಕೆ ಆದರ್ಶ ಮಾರ್ಗದರ್ಶಕರಾಗಿ ಕಷ್ಟಸಹಿಸಿಕೊಳುತ್ತಿ ದ್ದರು. ಬಂಗಾರವನ್ನು ಕಾಯಿಸಿ ಬಡಿದಂತೆಲ್ಲ ಹೊಳಪುಳ್ಳದ್ದಾ ಗುವದು. ತನಗೆ ಪೆಟ್ಟು ಬೀಳುವದೆಂದು ಕಾಸಿದರೆ ಸುಟ್ಟು ಹೋಗುವೆನೆಂದು ಅದು ಹಳಹಳಿಸುವದಿಲ್ಲ. ಇದಕ್ಕನುಗುಣ ವಾಗಿ ಶ್ರೀ ಚಿದಾನಂದರು ತಮ್ಮ ಗುರುವಿನ ಸೇವೆಯಲ್ಲಿದ್ದಾಗ ಪರರಿಂದ ತೊಂದರೆ ಬಂದರೂ ಲಕ್ಷಿಸದೆ ಆತ್ಮಸಾಕ್ಷಾತ್ಕಾರ ಸಾಧನೆಯಲ್ಲಿ ಮಗ್ನರಾಗಿರುತ್ತಿದ್ದರು. ಗುರುಗಳು ಸದಾವ ಕಾಲವೂ ಇವರನ್ನು ಬಳಿಯಲ್ಲಿರಿಸಿಕೊಂಡು ವಿಶ್ವವ್ಯಾಪಿಯಾದ ಶಿವನ ನೈಜಯಿರುವಿಕೆಯನ್ನೂ, ಅದನ್ನು ಸಗುಣದಲ್ಲಿಯೂ ನಿರ್ಗುಣದಲ್ಲಿಯೂ ಸಾಧಿಸಬಹುದಾದ ಸಾಧನಗಳನ್ನೂ ವಿವರಿಸಿ ತಿಳಿಹೇಳುತ್ತಿದ್ದರು. ಗುರುಶಿಷ್ಯರು ನಿಜವಾಗಿ ಅರಿಯುತ್ತ

ತದೇಕಾರ ವೃತ್ತಿಯನ್ನು ಬೆರಸುತ್ತ ಎಷ್ಟೋ ಸಮಯದ ವರೆಗೂ ಭಾವಸಮಾಧಿಯಲ್ಲಿ ಮುಗ್ಧರಾಗಿ ವಿಶ್ವವನ್ನು ಮರೆಯುತ್ತಿದ್ದರು. ಈ ರೀತಿಯ ಎಲ್ಲ ಸಂಗತಿಗಳನ್ನರಿತ ಸುಜ್ಞಾನಿಯು ತನ್ನಲ್ಲಿ ಸರ್ವಸಂಗತಿಗಳನ್ನೂ, ಸರ್ವಸಂಗತಿಗಳಲ್ಲಿ ತನ್ನನ್ನೂ ವಿಲೀನಗೊಳಿಸುವ ತಪಸ್ವಿಯು. ವಿಶ್ವದ ಯಾವ ಸಂಗತಿಯಲ್ಲಿಯೂ ಅವನು ಜಿಗುಪ್ಸೆ ಪಡುವದಿಲ್ಲ. ಶ್ರೀ ಚಿದಾನಂದರು ಅಂಥ ದಿವ್ಯ ಸಾಧನೆಯನ್ನು ಶ್ರೀ ದೇವಿಯ ದಯೆದಿಂದಲೂ, ಸದ್ಗುರು ಶ್ರೀ ಕೊಂಡಪ್ಪನವರಿಂದಲೂ ಹಸ್ತಗತ ಮಾಡಿಕೊಂಡ ಆದರ್ಶ ಪುರುಷರಾಗಿದ್ದರು. ಇಂಥ ಶಿಷ್ಯವೃಂದದಿಂದಲೇ ಗುರುವೃಂದದ ನಿಜವಾದ ಪ್ರತಿಭೆ ಹೊರಬರುತ್ತದೆ.

ತನ್ನ ಶಿಷ್ಯನಲ್ಲಿ ಎಲ್ಲ ಬಗೆಯ ಆತ್ಮೋನ್ನತಿಯ ಸಾಕ್ಷಾತ್ಕಾರದ ಭೂಮಿಕೆಯು ಪಕ್ವವಾಗಿರುವದನ್ನು ಕಂಡು ಹಠಯೋಗ, ರಾಜಯೋಗಗಳಲ್ಲಿ ವಿಜಯಶಾಲಿಯನ್ನಾಗಿ ಮಾಡಿ, ಆಗಾಗ ತನ್ನ ಶಿಷ್ಯನು ಶಾಸ್ತ್ರ ಹೇಳುತ್ತ ಸಮಾಧಿಸ್ಥನಾಗುವದನ್ನು ನೋಡಿ ಆನಂದಭರಿತರಾಗಿ ಶ್ರೀ ಚಿದಾನಂದರನ್ನು ತನ್ನ ಎದುರಿನಲ್ಲಿ ಕೂಡ್ರಿಸಿಕೊಂಡು, ಪಾಮರರೂ ಕೂಡ ಮುಕ್ತಿಯನ್ನು ಪಡೆಯುವಂತಹ ಸುಂದರವಾದ ಹಾಗೂ ಸುಲಭವಾದ ಗ್ರಂಥಗಳನ್ನು ರಚಿಸಿ, ಲೋಕೋದ್ಧಾರ ಕಾರ್ಯವನ್ನೆಸಗುತ್ತ, ಸಿದ್ಧ ಬುದ್ಧ ಪರ್ವತವಾಸಿನಿಯಾದ ಬಗಳಾಂಬಿಕೆಯ ಸನ್ನಿಧಿಯಲ್ಲಿದ್ದು ಪೂರ್ತಿ ಮುಗಿಸಿ ಅವಳಲ್ಲಿ ಬ್ರಹ್ಮಸ್ವರೂಪನ್ನು ಕಾಣು ಎಂದು ಆಜ್ಞಾಪಿಸಿದರು. ಶ್ರೀ ಚಿದಾನಂದರಿಗೆ ಕೊನೆಯದಾಗಿ ಆಶೀರ್ವದಿಸಿ ಸುಲಭಮಾರ್ಗದರಿಕೆಯ ಮುಕ್ತಿ ಸಾಧನೆಯನ್ನು

ತಿಳಿಸಿ, ಅನುಗ್ರಹಿಸಬೇಕೆಂದು ನಿರ್ಧರಿಸಿ ಅವರಿಗೆ ಉಪದೇಶ ವಿತ್ತರು.

"ಎಲೈ ! ಮಗು ಚಿದಾನಂದನೇ ಕೇಳು—ಸದ್ಗುರುವಿನ ಅನುಗ್ರಹಕ್ಕೆ ಪಾತ್ರನಾಗಿ, ನಮ್ರತೆ, ಅಂತಃಕರಣ, ಅದ್ವೈತ ಸಿದ್ಧಾಂತನಿಷ್ಠೆ, ವೈರಾಗ್ಯಶೀಲತೆ,ನಿಷ್ಕಾಮಭಕ್ತಿ, ಆತ್ಮಜ್ಞಾನದ ವಿಚಾರಾತ್ಮಕಬುದ್ಧಿ, ಬ್ರಹ್ಮವಿದ್ಯೆ, ಅಂತರೇಂದ್ರಿಯ ಹಾಗೂ ಬಹಿರೇಂದ್ರಿಯಗಳ ನಿಗ್ರಹಶಕ್ತಿ, ಬ್ರಹ್ಮಜ್ಞಾನದಿಂದರಿತು ಕೊಂಡು ಸತ್ಯ, ಪುಣ್ಯ, ಸದಾಚಾರಗಳ ಬಲವಿಲ್ಲದವನಿಗೆ ಮುಕ್ತಿಯು ಲಭಿಸುವದಿಲ್ಲ. ಸಂಸಾರ ದುಃಖದಾಂತಕವು ಅಡಗದೆ ಮುಕ್ತಿದೇವಿಯು ಪ್ರಸನ್ನಳಾಗುವದಿಲ್ಲ. ಸತ್ವ, ರಜ, ತಮೋ, ಗುಣಗಳೊಳಗಾಡಿ ಶೋಭಿಸದೆ, ಪುಣ್ಯದ ಕೈಜಳಕ ವೆಸೆಯದೆ, ಸುವಿಚಾರದ ಸಂಜ್ಞೆಗೂಡಿ ನೋಡದೆ, ಬಂಧುರ ವಾದ ಕಟ್ಟಳೆಯನ್ನು ಹಿಡಿಯದೆ ಮುಕ್ತಿದೇವಿ ಒಲಿಯುವದಿಲ್ಲ, ಅಹಂಕಾರ ಸತ್ತಲ್ಲದೆ ಸ್ವರ್ಗವಿಲ್ಲ. ನಿನ್ನಲ್ಲಿ ವಾಸ ಮಾಡಿರತಕ್ಕ ಅಹಂಕಾರವೆಂಬ ಉಪಾಧಿಯನ್ನು ತಲೆ ಎತ್ತದಂತೆ ಮಾಡು. ಅಹಂಕಾರವು ಕಿರಿಯದಾದಂತೆ ಪರಬ್ರಹ್ಮವು ಹಿರಿಯದಾಗಿ ಗೋಚರವಾಗುವದು. ನಿನ್ನ ಕಾಯದಲ್ಲಿ ಸೂರ್ಯಚಂದ್ರಾದಿ ಗಳಲ್ಲಿರುವ ನಿರ್ಮಲ ಪ್ರಕಾಶವು ಹೊಳೆಯುವದು. ಸುರಾಸುರ ನರೋರಗ ಮುನಿಕುಲ, ಪರಮಾಣು ಸಕಲ ಚರಾಚರ ವಸ್ತು ಮೊದಲಾದವುಗಳಿಗೆ ನೀನು ಅತೀತನಾದವನು. ಮನ, ಬುದ್ಧಿ, ಚಿತ್ತ, ಅಹಂಕಾರ ಮೊದಲಾದವುಗಳಿಗೆ ನೀನು ಸಾಕ್ಷೀರೂಪನು. ಜಾಗ್ರತಾವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತಾವಸ್ಥೆಗಳಿಗೆ ನೀನು

ಕಾರಣೀಭೂತನು. ಸತ್, ಚಿತ್, ಆನಂದರೂಪಗಳನ್ನಳ ವಡಿಸಿಕೊಂಡು ನಿತ್ಯ ಶುದ್ಧ ಬುದ್ಧ ಸಚ್ಚಿದಾನಂದ ಸ್ವರೂಪನೇ ನೀನಾಗಿರುವಿ. ಈ ನಿನ್ನ ಸ್ವರೂಪವನ್ನು ಸದಾವಕಾಲದಲ್ಲಿ ಅನುಸಂಧಾನಗೈದು ಪರಬ್ರಹ್ಮನಾಗಿ ಬಾಳುವ ಮಹಾನು ಭಾವನೇ ನೀನು. ಇನ್ನು ನಾನು ಈ ಹಿಂದೆ ಹೇಳಿದ ಹಠ ಯೋಗ ರಾಜಯೋಗಗಳನ್ನು ಸಾಧಿಸಿ ಬ್ರಹ್ಮಜ್ಞಾನಕ್ಕೆ ಸಹಾ ಯಕವಾದ ಏಕಾಗ್ರತೆಯನ್ನು ರೂಢಿಗಿಳಿಸಿ, "ಪಿಪೀಲಿಕಾ ಮತ್ತು ವಿಹಂಗಮ ಪದಾರ್ಥಗಳನ್ನನುಸರಿಸಿ ಬ್ರಹ್ಮಜ್ಞಾನದ ತಿರುಳನ್ನರಿತುಕೊಂಡು ಮುಕ್ತಿಯನ್ನು ಪಡೆ"ಯೆಂದು ತುಂಬ ಹೃದಯದಿಂದ ಆಶೀರ್ವದಿಸಿ ಅನುಗ್ರಹಿಸಿದರು. ಅದು ಅಲ್ಲದೆ ಕೊನೆಗೆ ಯೋಗಿ, ಭೋಗಿ, ತ್ಯಾಗಿ, ಅಷ್ಟೇಕೆ; ಸರ್ವವಿಶ್ವ ರೂಪಿಯೇ ನೀನಾಗಿದ್ದಿಯೆಂಬುದನ್ನರಿತುಕೊಂಡು ಅವಧೂತ ಸಿದ್ಧಪುರುಷನಾಗು. ಇನ್ನು ನಿನ್ನ ನಾಮ ಜಗದಲ್ಲಿ ಶ್ರೀ ಚಿದಾನಂದಾವಧೂತನೆಂಬ ಹೆಸರಿನಿಂದ ಬೆಳಗಿ ಅಮರವಾಗಲಿ ಎಂದು ಮಾರ್ಮಿಕವಾಗಿ ಉಪದೇಶಿಸಿ ಹರಸಿದರು. ಸದಾ ಕಾಲವು ನಿನ್ನ ಬಳಿಯಲ್ಲಿರುವೆ. ಲೋಕೋದ್ಧಾರ ಕಾರ್ಯದಲ್ಲಿ ಪ್ರವೃತ್ತನಾಗೆಂದು ಆಶೀರ್ವದಿಸಿ ಸಂತುಷ್ಟರಾದರು.

ಶ್ರೀ ಚಿದಾನಂದಾವಧೂತರು ಶ್ರೀ ಗುರುವಿನ ಅಪ್ಪಣೆ ಯನ್ನು ಜಗನ್ಮಾತೆಯ ಸಂದೇಶವೆಂದು ಶಿರಸಾವಹಿಸಿ ತುಂಗ ಭದ್ರಾ ನದಿಯ ಪಕ್ಕದಲ್ಲಿಯ ಸಿದ್ಧ ಬುದ್ಧ ಪರ್ವತವಾಸಿನಿಯಾದ ಶ್ರೀ ಬಗಳಾಂಬೆಯ ಪುಣ್ಯಕ್ಷೇತ್ರಕ್ಕೆ ಬಂದು, ಕೆಲವು ಕಾಲ ತಪಶ್ಚರ್ಯವನ್ನು ಮಾಡಿ, ಜಗನ್ಮಾತೆಯ ಸಗುಣ ಸಾಕ್ಷಾತ್ಕಾರ

ಮಾಡಿಕೊಂಡು, ಜೀವಿಗಳ ಜೀವನದ ಬಿಡುಗಡೆಗಾಗಿ ಆ ತಾಯಿ ಮುಖದಿಂದಲೇ ಬಂದಿರುವ ಜ್ಞಾನಾಮೃತ ಉಪದೇಶವನ್ನು ತಾವು ಲಿಪಿಕಾರರಾಗಿ ಬರೆದಿಟ್ಟು, ಎಲ್ಲ ಜೀವಾತ್ಮರನ್ನು ಪುನೀತ ಗೊಳಿಸಿದರು. ಇದಲ್ಲದೆ ಸದಾವಕಾಲವು ಹಠರಾಜಯೋಗ ಗಳಲ್ಲಿ ತನ್ಮಯರಾಗಿ ೨–೩ ತಿಂಗಳ ವರೆಗೂ ಸಮಾಧಿಸ್ಥರಾದಾಗ ಅವರನ್ನು ಭಕ್ತರೇ ಉಪಚರಿಸಿದರು.

# ೪. ಕೃತಿಗಳ ವಿವೇಚನೆ

ಶ್ರೀ ಚಿದಾನಂದಾವಧೂತರು ಶ್ರೀ ಗುರುವಿನ ಅಪ್ಪಣೆ ಯಂತೆ ಶ್ರೀ ಸಿದ್ಧ ಬುದ್ಧ ಪರ್ವತವಾಸಿನಿಯಾದ ಶ್ರೀ ತಾಯಿ ಬಗಳಾಂಬಿಕೆಯನ್ನು ಸಾಕ್ಷಾತ್ಕರಿಸಿಕೊಂಡು ಲೋಕೋದ್ಧಾರ ನಿಮಿತ್ತದಿಂದ ಕೇವಲ ಲಿಪಿಕಾರನಾಗಿ ಕೃತಿಗಳನ್ನು ರಚಿಸಿರುವ ದಾಗಿ ಹೇಳಿದ್ದಾರೆ, ಇವರು ತಮ್ಮ ಗುರುಗಳಾದ ಶ್ರೀ ಕೊಂಡ ಪ್ಪನವರನ್ನು ತಮ್ಮ ಕಾವ್ಯಗಳಲ್ಲಿ ಶ್ರೀ ಸದ್ಗುರುಚಿದಾನಂದ ರಾಜಯೋಗಿಗಳೆಂದು ಅಭೇದವಾಗಿ ಕಲ್ಪಿಸಿಯೇ ಗ್ರಂಥಾರಂಭ ಮಾಡಿರುವದನ್ನು ಕಾಣುತ್ತೇವೆ. ಇವರು ರಚಿಸಿದ ಗ್ರಂಥ ಗಳೆಂದರೆ 'ಜ್ಞಾನಸಿಂಧು', 'ಕಾಮ ವಿಡಂಬನೆ', 'ದೇವೀ ಮಾಹಾತ್ಮೆ'. 'ಬಗಳಾಂಬಾಸ್ತೋತ್ರ', 'ಚಿದಾನಂದರ ವಚನ', 'ಪಂಚೀಕರಣ ತತ್ವ ಚಿಂತಾಮಣಿ' 'ನವಚಕ್ರಕುಲರೇಖಾಲಕ್ಷಣ' ಮುಂತಾದವುಗಳು. ಇವುಗಳಲ್ಲಿ 'ಜ್ಞಾನಸಿಂಧು' 'ದೇವೀ ಮಾಹಾತ್ಮೆ' ಈ ಎರಡು ಗ್ರಂಥಗಳು ಅಮೋಘವಾದ ಕೃತಿಗಳಾಗಿವೆ. ಅವೆರಡೂ ಗ್ರಂಥಗಳು ಮುಮುಕ್ಷುಗಳಿಗೆ ಕಾಮಧೇನುಗಳಾಗಿವೆ. ಅವರ ಕೃತಿಗಳನ್ನು ಈಗ ಸ್ಥೂಲವಾಗಿ ವಿವೇಚಿಸೋಣ.

(೧) **ಜ್ಞಾನಸಿಂಧು:**—ಇದು ಭಾಮಿನೀ ಷಟ್ಪದಿಯಲ್ಲಿ ಬರೆದದ್ದು. ಇದರಲ್ಲಿ ಅಧ್ಯಾಯ ೪೯ ಇದ್ದು, ೩೬೨೧ ಪದ ಗಳಿಂದ ತುಂಬಿದೆ. ಇದರಲ್ಲಿ ಅದ್ವೈತ ವೇದಾಂತವು ವಿಸ್ತಾರ

ವಾಗಿ ನಿರೂಪಿಸಲ್ಪಟ್ಟಿದೆ. ಶಿವನು ಷಣ್ಮುಖನಿಗೆ ಹೇಳಿದ ಅಧ್ಯಾತ್ಮಬೋಧೆಯನ್ನು ವಿವರಿಸುವದಾಗಿ ಶ್ರೀ ಚಿದಾನಂದಾವಧೂತರು ಹೇಳಿದ್ದಾರೆ. ವ್ಯಾಕರಣಕ್ಕೆ ವಿಶೇಷವಾಗಿ ಗಮನವನ್ನು ಕೊಡದೆ ಪಾಮರರಿಗೂ ತಿಳಿಯುವ ಹಾಗೆ ಬರೆದಿರುವದಾಗಿ ತಿಳುಹಿಸಿದ್ದಾರೆ. "ತಾನೆ ತನ್ನನು ತಿಳಿದು ತಾನೇ ತಾನಾಗಿಯೇ ತನ್ನನುಭವ ತುಂಬಿಕೊಂಡಿರಲು ಜ್ಞಾನಸಿಂಧು ಎಂಬ ಪೆಸರಾಯ್ತು"ಎಂದೂ ಇದರಲ್ಲಿ ಸರ್ವಶಾಸ್ತ್ರಾರ್ಥವನು ಪೇಳಿಹೆ, ಸರ್ವಗೀತೆಗಳರ್ಥಸಾರವನು ಉಸುರಿರ್ಪೆ" ಎಂದೂ ಕವಿಯೇ ಹೇಳಿಕೊಂಡಿದ್ದಾನೆ. ಗ್ರಂಥಾವತಾರದಲ್ಲಿ ಚಿದಾನಂದ ಗುರುಗಳ ಸ್ತುತಿಯಿದೆ. ಅಧ್ಯಾಯಗಳ ಕೊನೆಯಲ್ಲಿ ಇತಿ ಶ್ರೀ ಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀ ಚಿದಾನಂದಗುರುವರ್ಯ ಚರಣಪದ್ಮದ್ವಿರೇಪ ಶ್ರೀ ಚಿದಾನಂದಾವಧೂತವಿರಚಿತ ಜ್ಞಾನಸಿಂಧು ಗ್ರಂಥದಲ್ಲಿ—ಎಂಬ ಗದ್ಯವಿದೆ. ಗಾಢಾಂಧಕಾರದಲ್ಲಿ ಬದ್ಧನಾಗಿ ಬಿದ್ದಂಥ ಜೀವಾತ್ಮನು ಸುಲಭವಾಗಿ ಆತ್ಮಸಾಗರದಲ್ಲಿ ಸಾಮರಸ್ಯವನ್ನು ಪಡೆಯಬೇಕಾದರೆ ಹೇಗೆ ಅವನು ತನ್ನ ಸಾಧನೆಯನ್ನು ಕಾರ್ಯರೂಪಕ್ಕೆ ಅಣಿಗೊಳಿಸಬೇಕೆಂಬುದನ್ನು ಒಳ್ಳೇ ಸುಂದರವಾಗಿ ಜ್ಞಾನಸಂಪತ್ತನ್ನು ವಿವರಿಸಿದ್ದಾರೆ. ಅಂಥ ಅಜ್ಞಜೀವನು ಯಾವ ರೀತಿಯಾಗಿ ಮುಂದುವರಿಯಬೇಕೆಂಬುದನ್ನು ಪ್ರತಿಯೊಂದು ಅಧ್ಯಾಯದ ಮುಖಾಂತರ ತಿಳಿಸಿದ್ದಾರೆ. ಇದು ನಿಜವಾಗಿಯೂ ಜ್ಞಾನದ ಸಿಂಧೂವೇ ಆಗಿದೆ–ಎನ್ನುವ ಸಂಗತಿ ವಿಶೇಷಾರ್ಥವುಳ್ಳ ಆಯಾ ಸಂಧಿಗಳ ಶಿರೋನಾಮೆಗಳಿಂದ ತಿಳಿದುಬರುತ್ತಿದೆ. ಅಧಿಕಾರಿ ಲಕ್ಷಣ,

ವೈರಾಗ್ಯನಿರ್ಣಯ, ಗುರುಕಟಾಕ್ಷ, ತತ್ವನಿರ್ಣಯ, ಜೀವೇಶ್ವ-ರೈಕ್ಯ, ಜೀವಪರಮಾತ್ಮೈಕ್ಯ, ನಿಶ್ಚಯಜ್ಞಾನ, ನಿಜಬೋಧೆ, ನಿರಾಲಂಬ, ಸಾಧನಚತುಷ್ಟಯ, ಸಪ್ತಭೂಮಿಕಾ, ಶ್ರವಣ ಮನನ ನಿಧಿಧ್ಯಾಸನ, ಹಠಯೋಗ ನಿರ್ಣಯ, ಲಯಯೋಗ, ಹಠರಾಜಯೋಗ, ಭಕ್ತಿಯೋಗ, ಯೋಗಾಂಗ ಲಕ್ಷಣ, ಚಿದ್ವಿವೇಕ, ಬಹುಸಮಾಧಿಲಕ್ಷಣ, ಸಗುಣ ನಿರ್ಗುಣ ಬ್ರಹ್ಮೋಪಾಸನ, ಸಹಜಾನಂದರಾಜಯೋಗ, ಸತ್ಕರ್ಮಯೋಗ, ಸತ್ಕರ್ಮತ್ಯಾಗ, ಸಾಧುಲಕ್ಷಣ, ರಾಜಯೋಗ, ದಶಸಾತ್ವಿಕಲಕ್ಷಣ, ಪ್ರಕೃತಿಪುರುಷಲಕ್ಷಣ, ಪುರುಷಲಕ್ಷಣ, ಶಾಂತಿಲಕ್ಷಣ, ಗುಣತ್ರಯ, ಜೀವಜನ್ಮವಿಚಾರ, ಜೀವತ್ರಯ, ಜೀವಶಿವಚತುಷ್ಟಯ, ವಾಸನಾಕ್ಷಯ, ಪರಬ್ರಹ್ಮಸ್ವರೂಪ, ಸದ್ಗುರುಸಚ್ಛಿಷ್ಯಲಕ್ಷಣ, ಸಹಜಸಮಾಧಿಲಕ್ಷಣ, ಖಂಡಿತವಾಚ್ಯ ಲಕ್ಷಣ, ಜೀವನ್ಮುಕ್ತಿ ಸ್ಥಿತಿ ಲಕ್ಷಣ, ಅದ್ವೈತವಸ್ತು ಲಕ್ಷಣ, ಸನ್ಯಾಸಯೋಗ ಲಕ್ಷಣ, ಅವಧೂತ ಚರಿತ್ರೆ, ಮೋಹ-ವಿವೇಕ ಯುದ್ಧ, ವಿಭೂತಿ ನಿರ್ಣಯ, ವಿಶ್ವರೂಪ ನಿರ್ಣಯ, ಪೂಜಾ ದ್ವಿತೀಯ ಶಾಸ್ತ್ರೋಪಸಂಹಾರ ಲಕ್ಷಣ, ಸುಖಬೋಧೆ, ಮುಂತಾದ ಪ್ರಕರಣಗಳನ್ನೂ, ಅವಲೋಕಿಸಿದಾಗ ವೇದಾಗಮೋಪನಿಷತ್ತುಗಳ ಸಾರವೇ ಇದರಲ್ಲಿ ಬಟ್ಟಿಯಿಳಿದು ಬಂದಂತಾಗಿದೆ. ಕೆಲವರು ರಂಗನಾಥರ ಅನುಭವಾಮೃತವನ್ನು ಅನುಸರಿಸಿಯೇ ಶ್ರೀಚಿದಾನಂದಾವಧೂತರು ಜ್ಞಾನಸಿಂಧುವನ್ನು ರಚಿಸಿರುವರೆಂದು ತರ್ಕಿಸುವರು. ಯಾರೇ ಆಗಲಿ; ಜೀವನು ಶಿವನಲ್ಲಿ ಬೆರೆಯುವ ಸಾಧನಗಳನ್ನು ಬಾಹ್ಯವಾಗಿ ತೋರ್ಪಡಿಸಲು ಪ್ರಾಯೋಗಿಕ

ವಸ್ತುಗಳಿಲ್ಲದೆ ವಿವರವಾಗಿ ಸಾಮಾನ್ಯರೂ ಕೂಡ ಸುಲಭವಾಗಿ ಗಹನವಾದ ವೇದಾಂತ ವಿಷಯವನ್ನು ಪದ್ಯಕಾವ್ಯರಚನೆಯಲ್ಲಿ ತಿಳಿಸುವದು. ಸ್ವತಃ ಅನುಭವಿಸಿದ ಅನುಭವವನ್ನು ಹೇಳು ವದು ಲೋಕಕ್ಕೆ ಪ್ರಾಸಾದಿಕವಾಣಿಯಾಗಿ ಹೇಗೆ ಬರುವುದೋ ಹಾಗೆ ಅನುಕರಣ ಜ್ಞಾನವು ಬಾರದು.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ವಿವೇಚಿಸೋಣ.

ಗಳಿಸುವನು ಸುಖದುಃಖವೆರಡನು ।
ತೆಳರುವನು ಸ್ವರ್ಗಕ್ಕೆ ನರಕಕೆ ।
ಇಳೆಗೆ ತಿರುಗುವ ಸುಕೃತದುಷ್ಕೃತ ಫಲದ ಮುಖದಿಂದ ।
ಬಳಲುವನು ಬಹುಕಾಮ್ಯ ಬಳಸಿಯೆ ।
ಸುಳಿವನಾನಾಪದಗಳಲಿ ತಾ।
ನುಳಿವುಪಾಯುವ ಕಾಣದಲೆ ಇಹಜೀವ ಕೇಳೆಂದಾ ॥

ಈ ಪದ್ಯವನ್ನು ನೋಡಿದಾಗ ಜೀವನು ಹೇಗೆ ಜನನಕ್ಕೆ ಬರುವ, ಅವನಿಗೆ ಸುಖದುಃಖಗಳು ಹೇಗೆ ಪ್ರಾಪ್ತವಾಗುತ್ತಿವೆ. ಕೊನೆಗೆ ಅವನು ಪಾಪಪುಣ್ಯಗಳಿಂದ ನರಕ, ಸ್ವರ್ಗವನ್ನು ಹೇಗೆ ಪಡೆಯುವನು ಎಂಬುದು ಸುಲಭವಾಗಿ ಸಾಮಾನ್ಯ ಜೀವಿಗೂ ತಿಳಿಯುವಂತೆ ಹೇಳಲಾಗಿದೆ. ಇದಲ್ಲದೆ ಜೀವನು ಹೇಗೆ ನಡೆದುಕೊಂಡರೆ ಶಿವಸನ್ನಿಧಿಯನ್ನು ಪಡೆಯುವನೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಅಲ್ಲದೆ ವಾಙ್ಮಯಂತಪದ ಬಗೆಗೂ ಸದ್ಗುರು

ವಿನ ಬಗೆಗೂ ಹೇಳಿರುವ ಈ ಕೆಳಗಿನ ಎರಡು ಪದ್ಯಗಳಿಂದ ಅವುಗಳ ಬಗೆಗಿರುವ ಮಹತಿ ವೇದ್ಯವಾಗುತ್ತಿದೆ.

ನುಡಿಯುದಾರನು ದುಷ್ಟವಚನವ ।
ಮಿಡುಕುತಲಿ ಹಿಂಸೆಗಳ ಕಂಡರೆ ।
ಯಡಗಿ ಮಾತಾಡುತ್ತ ಮೃದುವಾಕ್ಯಗಳ ನುಡಿಯುತ್ತ ॥
ಕಡುನಿರಂತರತತ್ವಬೋಧೆಯು ।
ಸಡಗರವನೆಲ್ಲರಿಗೆ ಹೇಳುತ ।
ಪಡುತ ಸಂತಸವಿರಲು ವಾಙ್ಮಯತಪವದುವೆ ಎಂದ ॥

ಅಚ್ಚಬೆಳುದಿಂಗಳಿನ ಪ್ರಭೆಗಳ ।
ಮುಚ್ಚಿಸಿಯೆ ಆನಂದಸುಖವನು ।
ಹೆಚ್ಚಿಸಿಯೆ ಚಿದ್ಬಿಂದುಕಳೆಗಳ ಕವಚ ತೊಡಸಿಯೆ ಮೋಕ್॥
ಎಚ್ಚರನು ಮರಸಿಯೆ ಅವಿದ್ಯೆಯಂ ।
ಕೊಚ್ಚಿಸಿಯೆ ಪರಿಪೂರ್ಣಪರವಶ ।
ದಚ್ಚರಿಯ ಮಾಳ್ಪಾತನೇ ಸದ್ಗುರುವು ಕೇಳೆಂದ ॥

ಇವೆಲ್ಲವುಗಳನ್ನು ಅವಲೋಕನಮಾಡಲಾಗಿ ಈ ಜ್ಞಾನಸಿಂಧು ಅತ್ಯುತ್ತಮಗ್ರಂಥವಾಗಿದೆ. ಇದರಲ್ಲಿ ಅನುಭವಶಾಸ್ತ್ರವಿರುವದು. ಇದರಲ್ಲಿ ಪ್ರತಿಯೊಂದು ವಿಷಯಗಳೂ ಉಪನಿಷದರ್ಥಗಳೇ ಇರುವವು. ಇದು ಮಹಾಪ್ರಾಸಾದಿಕ ಗ್ರಂಥವಿದ್ದು ಸರ್ವಮಾನ್ಯವಾಗಿರುವದು.

೨) **ಪಂಚೀಕರಣ :**— ಇದರಲ್ಲಿ ೧೫ ವಚನಗಳಿವೆ. ಪ್ರತಿಯೊಂದು ವಚನವು ಚಿದಾನಂದಸದ್ಗುರು ಪ್ರಭುವೇ ಎಂದು ಮುಗಿಯುತ್ತಿದೆ. ಅದರಲ್ಲಿ ಒಂದು ವಚನವು ಈ ರೀತಿಯಾಗಿದೆ.

"ಕೇಳಯ್ಯ ದೇಹ ಬೀಳಲು ಪೃಥ್ವಿಪೃಥ್ವಿಯಕೂಡಿತು, ಅಪ್ಪು ಅಪ್ಪ ಕೂಡಿತು; ತೇಜ ತೇಜವ ಕೂಡಿತು; ವಾಯು ವಾಯು ಕೂಡಿತು; ಆಕಾಶ ಆಕಾಶ ಕೂಡಿತು; ಪಂಚಭೂತ ತತ್ವಂಗಳು ಆಯಾ ಭೂತತತ್ವಂಗಳಲ್ಲಿ ಕೂಡಿದವು; ತತ್ವದ ಗುಣಂಗಳು ತತ್ವವ ಹೊಂದಿದವು. ನೀನು ಅಂಗರಹಿತನು. ನೀನು ನಿರ್ವಿಕಾರನು. ನಿರ್ವಯಲು ಕಾಣ ಚಿದಾನಂದಸದ್ಗುರುವೆ"— ಎಂದು ಪ್ರತಿವಚನಗಳು ಆಧ್ಯಾತ್ಮಸಾರವನ್ನು ವಿವರಿಸುತ್ತಿದ್ದು, ಕೊನೆಯಲ್ಲಿ ಸ್ವಗುರುಸ್ತುತಿರೂಪವಾದ ಈ ಶ್ಲೋಕವಿದೆ.

ಶ್ರೀಮದದ್ವೈತವಾರಾಶಿ ಸಂಭೂತಾತ್ಮಸುಧಾಕರಂ ।
ಚಿದಾನಂದಮಹಂ ವಂದೇ ಗುರುಂದೇವಮಹರ್ನಿಶಂ ॥

೩) **ತತ್ವಚಿಂತಾಮಣಿ :—** ಇದು ಗದ್ಯರೂಪವಾಗಿದೆ. ಧ್ಯಾನಪರತತ್ವಚಂದ್ರೋದಯ, ವಿಶ್ವವಿರಾಟ್ಪುರುಷವಿವರ, ಜೀವೇಶ್ವರೈಕ್ಯವಿಚಾರ ಎಂಬ ವಿಭಾಗಗಳನ್ನು ಒಳಗೊಂಡಿದೆ. ಇದರಲ್ಲಿ ಪ್ರಣವನಾದಬಿಂದುಸ್ವರೂಪ, ಮಾಯಾಸ್ವರೂಪ, ಈಶ್ವರಸ್ವರೂಪ, ಆತ್ಮಸ್ವರೂಪ, ಪರಬ್ರಹ್ಮಸ್ವರೂಪ, ಮೋಕ್ಷ ಸ್ವರೂಪ ಮುಂತಾದ ವಿಷಯಗಳು ನಿರೂಪಿಸಲ್ಪಟ್ಟಿವೆ. ಪ್ರಕರ ಣಗಳ ಕೊನೆಯಲ್ಲಿ ಮಾತ್ರ, ಇತಿ ಶ್ರೀಮತ್ಪರಮಹಂಸ ಪರಿ ವ್ರಾಜಕಾಚಾರ್ಯ ಶ್ರೀ ಚಿದಾನಂದಾವಧೂತ ವಿರಚಿತ ತತ್ವಚಿಂತಾ ಮಣಿಯೊಳ್ ಎಂಬ ಗದ್ಯವಿದೆ.

೪) **ನವಚಕ್ರಕುಲರೇಖಾಲಕ್ಷಣ :—** ಇದರಲ್ಲಿ ಶಿವ ಪಾರ್ವತಿಸಂವಾದರೂಪವಾದ ಶ್ಲೋಕಗಳನ್ನು ಉದಾಹರಿಸಿ

ಟೀಕೆಯನ್ನು ಬರೆದು ಗದ್ಯರೂಪವಾಗಿ ವೇದಾಂತವಿಷಯ ಗಳನ್ನು ಹೇಳಿದೆ. ಗ್ರಂಥವು ಹೀಗೆ ಆರಂಭವಾಗುತ್ತದೆ:

ಪರಮೇಶ್ವರನಂ ಕುರಿತು ಪಾರ್ವತಿ ಪರಬ್ರಹ್ಮೋಪಲ ಕ್ಷಣಸ್ವರೂಪವೆನಿಪ ತಾರಸಂಜ್ಞಾರ್ಥರಹಸ್ಯಂಗಳನು ಕೋಶ ಪ್ರತಿಕೋಶವೆನಿಪ ಈ ಪರ್ಯಾಯನಾಮದಿಂ ಶ್ರುತಿಸಮ್ಮತವಾಗಿ ಪೇಳಲು ತಕ್ಕುದೆಂದು ಪ್ರಶ್ನೆಗೆಯ್ಯುತ್ತಿದ್ದಾಳೆ.

೫) **ಬಗಳಾಂಬಾಸ್ತೋತ್ರ :—** ಇದರಲ್ಲಿ ೧೦೧ ಪದ ಗಳಿವೆ. ಗ್ರಂಥವು ಸಿದ್ಧಪರ್ವತವಾಸಿನಿಯಾದ ಬಗಳಾಂಬೆಯ ಸ್ತುತಿರೂಪವಾಗಿದೆ. ಪ್ರತಿಪದದಲ್ಲಿಯೂ ಚಿದಾನಂದ ಎಂಬ ಅಂಕಿತವಿದೆ. ಇದರಿಂದ ಕೆಲವು ಪದಗಳನ್ನು ನೋಡಬಹು ದಾಗಿದೆ.

ಏರಿಸುತ ಹಲಗೆ ಬಿದಿರಿಸುತ ಕರವಾಳ ।
ಚೀರಿ ಕೂಗಲು ನಡುಗೆ ದೈತ್ಯಜನಜಾಲ ।
ತೂರಿದಳು ಸಿಡಿಲಂತೆ ಪರಬಲದೊಳಂಬ ।
ಧೀರೆಯು ಚಿದಾನಂದರಾಣಿ ಬಗಳಾಂಬ ॥

ಕರವಿಡಿಯೆ ಭಿಕ್ಷುಕನ ನೀನು ತತ್‌ಕ್ಷಣಕೆ ।
ದೊರೆಯೆನಿಸಿಕೊಂಡನವ ಸಕಲಭುವನಕ್ಕೆ ।
ತಿರುಕತನವುಂಟೆ ಪರಬ್ರಹ್ಮ ಪರಶಿವಗೆ ।
ಗುರುಚಿದಾನಂದ ಬಗಳೆಯು ಒಲಿಯಲವಗೆ ॥

ಮುಂತಾದ ೧೦೧ ಸ್ತೋತ್ರಪದಗಳನ್ನು ನೋಡಿದಾಗ ಮನ ತುಂಬಿ, ಹೃದಯವಿಶಾಲತೆಯನ್ನು ತಾಳಿ, ಜೀವಭಕ್ತಿ ತುಂಬಿ ಆನಂದೋನ್ಮಾದವಾಗುತ್ತಿದೆ.

೬) **ಕಾಮವಿಡಂಬನ**:— ಇದರಲ್ಲಿ ೧೧೦ ಪದಗಳಿವೆ. ಇವುಗಳಿಗೆ ಕೋಳಿಪದಗಳೆಂದು ಕರೆಯುವದುಂಟು. ಆದರೆ ಅವುಗಳಲ್ಲಿ ಅರ್ಥಗರ್ಭಿತ ಆಧ್ಯಾತ್ಮತಳಹದಿಯು ಕಾಮದ ವಿಡಂಬನವಿದೆ. ಅವುಗಳಲ್ಲಿಯ ಒಂದನ್ನಿಲ್ಲಿ ನೋಡಬಹುದು. ಆರಂಭದಲ್ಲಿ ಈ ಪಲ್ಲವಿ ಇದೆ.

ದುಮ್ಮಿಸಾಲು ಕಾಮನಿಂಗೆ ।
ದುಮ್ಮಿ ತಜ್ಞನಕನಿಂಗೆ ।
ನೆಮ್ಮಿ ಭಜಿಸಿ ನಿಜವನರಿತು ಕಾಮಹರನನು ॥ಪ॥
ಕೀವಿ ತೋರ್ಪ ಬ್ರಹ್ಮದೊಳಗೆ ।
ಕಾವದೆಲ್ಲಿ ಭೇದಕಿಹುದು ।
ಸಾವು ತೊಟ್ಟು ತೋರ್ಕೆ ಮಾಯೆಯಾತ್ಮಗಿಲ್ಲವು ॥
ಆವನಾದಡೇನು ನರನು ।
ಭಾವಶುದ್ಧಿಯಿರಲು ಶ್ರೇಷ್ಠ ।
ಭಾವಿಸುವದೆ ಜಾತಿನೀತಿಕುಲಗಳಿಲ್ಲವು ॥
ಬೇಡಿದವರಿಗೀಯಲಾರ ।
ನೋಡಿ ನೋಡಿ ಹಿಗ್ಗುತಿರುವ ।
ಕೋಡಿತನದಿ ಹೆರರು ಕೊಂಬರೆನುತಲಂಜುವ ॥
ಮೂಢನಾಗಿ ದಿಟವ ಮರೆತು ।

ಗಾಢಧನದ ತೃಷ್ಣೆಯಿಂದ
ಕೇಡುಂ ಕಡೆಗೆ ಬಹುದ ತಿಳಿದು ತಿಳಿದುಂ ಕೆಡುವನೈ ॥
ನಚ್ಚಿದವರ ಕೊರಳ ಕೊಯ್ದು ।
ಬೆಚ್ಚಿದವರ ಬೆಸುಗೆ ಬಿಡಿಸಿ ।
ಮೆಚ್ಚಿದವರ ಮೋಸಗೊಳಿಸಿ ಧನವ ಗಳಿಸುತ ॥
ಮಿಂಚಿ ಬರಲು ಸಟೆಯುಂ ನುಡಿದುಂ ।
ಹಿಂಚಿ ಬದುಕಲೆಳಸಿದವಗೆ ।
ಸಂಚಕಾರ ಕೊಡದೆ ಬಿಡರು ಯಮನ ದೂತರು ॥

೭) ಚಿದಾನಂದರ ವಚನ :—ವಚನ ಎಂಬ ಹೆಸರಿದ್ದರೂ ಇವು ನಿಜವಾಗಿಯೂ ಹಾಡುಗಳಾಗಿವೆ. ಒಂದನ್ನಿಲ್ಲಿ ನೋಡಬಹುದು.

ರಾಗ–ಕಾಂಬೋದಿ–ಆದಿತಾಳ

ಸಾಧನವೇಕೆ ಸಾಧನವೇಕೆ ।
ಸದ್ಗುರುನಾಥನ ಸನ್ನಿಧಿಯಿರಲಿಕೆ ॥ ಪ ॥
ಯಮನಿಯಮಾಸನವೆಂಬುವು ಏಕೆ ।
ಕಮಲಾಸನವನು ಒಲಿಯಲದೇಕೆ ।
ಕ್ರಮದಲಿ ವಾಯುವ ಬಿಗಿಯಲದೇಕೆ ।
ಭ್ರಮಿಂತದಿ ಬ್ರಹ್ಮವ ಕೂಡಲದೇಕೆ ॥ ೧ ॥
ಮಿತಿಯಾಹಾರವ ಮಾಡಲದೇಕೆ ।
ಅತಿ ವೈರಾಗ್ಯವು ದೇಹಕದೇಕೆ ।

ಸತತವು ಕಾಡನು ಸೇರುವದೇಕೆ ॥
ಮತಿ ತಿಳಿಯದೆ ಓಡಾಡುವದೇಕೆ ॥ ೨ ॥
ಶರಧಿರೆ ಒರತೆಯ ತೋಡುವುದೇಕೆ ।
ತರಣಿರೆ ದೀವಿಗೆಗೆಣ್ಣೆಯದೇಕೆ ।
ಗುರುಚಿದಾನಂದನಿರೆ ಯೋಗಗಳೇಕೆ ।
ಕರಚರಣದಿ ಗುರು ಬಂದಿರಲಿಕ್ಕೆ ॥ ೩ ॥

ಇಂಥ ಅನೇಕ ತತ್ವಪದಗಳನ್ನು ರಾಗ, ತಾಳ, ಬದ್ಧವಾಗಿ ಹಾಡಲು ಪ್ರಾರಂಭಿಸಿದರೆ ಪ್ರಪಂಚತಾಪದಲ್ಲಿ ಸಿಲುಕಿ ಉನ್ಮತ್ತನಾದ ಜೀವನು ಕೆಲವು ಕಾಲ ಮರೆತು ಶಿವನ ಸಹಜಾನಂದಲ್ಲಿ ಭ್ರಮಿಂತಗೊಳ್ಳುವದರಲ್ಲಿ ಸಂಶಯವಿಲ್ಲ. ಅಂತೆಯೇ ಶ್ರೀ ಚಿದಾನಂದಾವಧೂತರು ಪದಗಳನ್ನು ಹಾಡಲು ಪ್ರಾರಂಭಿಸಿದರೆ ಅವರ ಕಂಠ ಮಾಧುರ್ಯಕ್ಕೆ ಜನರು ಮೆಚ್ಚಿ ತಲೆದೂಗುತ್ತಿದ್ದರೆಂಬುವದು ಅಚ್ಚರಿಯ ವಿಷಯವೇನೂ ಅಲ್ಲ.

**೮) ದೇವೀ ಮಹಾತ್ಮೆ :**—ಇದನ್ನು ಭಾಮಿನಿ ಷಟ್ಪದಿಯಲ್ಲಿ ಬರೆದಿದೆ. ಸಂಧಿ ೧೮, ಪದಗಳು ೭೯೬. ಕೆಲವರು ಇದನ್ನು ಸಂಸ್ಕೃತದ ಸಪ್ತಶತಿಯ ಭಾಷಾಂತರವೆಂದು ಹೇಳುವರು. ಎರಡೂ ಗ್ರಂಥಗಳಲ್ಲಿಯ ಭಾವ, ಶಕ್ತಿಯ ಮಹಿಮೆ, ಫಲ ಸೂಚನೆ ಒಂದೇಯಾಗಿದೆ. ಆದರೂ ಇದು ಮಾನವರಿಂದಲೇ ಸುಲಭದಲ್ಲಿ ಬಂದಿರುವ ಕಾಮಧೇನುವೆನಿಪ ಆತ್ಮಪುರಾಣವಾಗಿರದೆ ಅಲೌಕಿಕವಾಗಿ ದೇವಿಯ ಪ್ರೇರಣೆಯಿಂದ ಪ್ರಾಸಾದಿಕ ಪವಿತ್ರವಾಗಿ ಬಂದುದೆಂದು ಹೇಳಬಹುದು. ನಿಷ್ಠೆ

ಯಿಂದ ಕೂಡಿದ ಭಕ್ತ ಭಿಕ್ಷುಕನಾಗಿದ್ದರೂ ಶ್ರೀ ದೇವಿಯ ಕೃಪೆಯು ಲಭಿಸಿದಲ್ಲಿ ರಾಜಪುರುಷನಾಗಿ ವೈಭವದಿಂದ ಮೆರೆಯಬಹುದು—ಎಂಬುದಕ್ಕೆ ಅದೆಷ್ಟೋ ಮಹಾತ್ಮರ ಉದಾಹರಣೆಗಳು ಸಾಕಷ್ಟಿವೆ. ಇನ್ನು ಆ ಗ್ರಂಥದ ಮಹಿಮೆಯನ್ನು ವಿಪರವಾಗಿ ಹೇಳದೆ ಸ್ಥೂಲವಾಗಿ ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ರಾಜಯೋಗಾನುಭವಿಗಳಾದ ಶ್ರೀ ಚಿದಾನಂದರ ಪರಮ ಶಿಷ್ಯರೂ ಸಚ್ಚಿದಾನಂದ ಸ್ವರೂಪಿ ದೇವಿಯನ್ನು ಪ್ರತ್ಯಕ್ಷ ಕಂಡು ಆಕೆಯ ಪೂರ್ಣಕೃಪಾಪಾತ್ರರೂ ಪರಮಹಂಸ ಸನ್ಯಾಸಿಗಳೆನಿಸಿ ತಮ್ಮ ದರ್ಶನಾದಿಗಳಿಂದ ಭಕ್ತರ ಪಾಪ ಕಳೆದು ಹಿತ ಮಾಡುವವರೂ ಆದ ಶ್ರೀ ಚಿದಾನಂದಾವಧೂತರು ಗುರುವಿನಾಜ್ಞಾ ಪ್ರಕಾರ ಲೋಕೋದ್ಧಾರಾರ್ಥ ಸಕಲ ಮುಮುಕ್ಷುಗಳಿಗೆ ಚತುರ್ವಿಧ ಪುರುಷಾರ್ಥ ಪ್ರಾಪ್ತಿಯ ಸಲುವಾಗಿ ತಿಳಿಗನ್ನಡ ಸುಲಭ ರೂಪದಿಂದ ಈ ಪುರಾಣ ರಚಿಸಿರುವ ಕಾರಣ ಇದು ಸರ್ವಜನಸೇವ್ಯವಾಗಿರುವದೆಂಬುದು ಸರ್ವಾನುಭವವಾಗಿದೆ. ಗ್ರಂಥದಲ್ಲಿ ಹೇಳಿದ ಪ್ರಕಾರ ವಿಧಿಯುಕ್ತನಾಗಿ ಭಕ್ತಿಯಿಂದ ಸದಾ ದೇವಿಯ ಚರಿತ್ರೆಯನ್ನು ಸ್ಮರಿಸಿದರೆ ಸಕಲ ಇಷ್ಟಾರ್ಥ ಸಿದ್ಧಿಯಾಗುವದರಿಂದ ಮತ್ತು ಸಾಧನಗಳಿಂದಾಗದುದು ಸಹ ನೆನಹು ಮಾತ್ರದಿಂದಾಗುವದರಿಂದ ಈ ಗ್ರಂಥವು ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿಗಳಿಗಿಂತ ಅಧಿಕ ಮಹತ್ವದ್ದಾಗಿರುವದು. ಗ್ರಂಥಾರಂಭದಲ್ಲಿ ಪರಶಿವನನ್ನು ಕುರಿತು ಶಿವಗಣ ವೃಂದವು, ದೇವಾ! ನಮಗೆ ಮಹಸಂಪ್ರೀತಿಯ ಕಥೆಯನ್ನು

ಹೇಳಬೇಕೆಂದು ಕೇಳಲು, ಶಿವನು ಮೆಚ್ಚಿ ಆನಂದಿತನಾಗಿ ಸಮ್ಮುಖದಲ್ಲಿರುವ ನಂದೀಶ್ವರನಿಗೆ ಈ ಕಥೆಯನ್ನು ಹೇಳಿದ ನೆಂದು ತಿಳಿಸಿದ್ದಾರೆ. ಈ ಪುರಾಣವು ಬಸವನ ನಿಮಿತ್ತವಾಗಿ ಸರ್ವಮುಮುಕ್ಷುಗಳಿಗೆ ಉಪದೇಶಪರವಾಗಿದೆ. ನಂದೀಶ್ವರ ಅಥವಾ ಬಸವನೆಂದರೆ ಸಕಲಾನಂದಗಳಿಗೆ ಶ್ರೇಷ್ಠವಾದ ಪರಮಾನಂದದನುಭವವುಳ್ಳವನು ಮತ್ತು ಸ್ವರೂಪದಿಂದ ಜಗತ್ತಿಗೆಲ್ಲ ಆನಂದವನ್ನುಂಟುಮಾಡುವವನೆಂಬರ್ಥದಲ್ಲಿ ಉಪ ಯೋಗಿಸಲಾಗಿದೆ. ಇದರಲ್ಲಿ ಪ್ರಮುಖವಾಗಿ ನಾಲ್ಕು ಭಾಗ ಗಳನ್ನು ಮಾಡಬಹುದು. ೧) ಕರ್ಮಕಾಂಡ. ೨) ಉಪಾಸನಾ ಕಾಂಡ, ೩) ಜ್ಞಾನಕಾಂಡ, ೪) ಜೀವನ್ಮುಕ್ತಿ ಎಂದು.

೧) **ಕರ್ಮಕಾಂಡ :** ಇದರಲ್ಲಿ ಮಹಾಸಂಪ್ರೀತಿ ಪಾವನ ಕಥೆ ಯೆಂದರೆ ಯಾವದು? ಶಿವಪುರವೆಂದರೇನು? ಸಾಮೀಪ್ಯಪದ ದವರು, ನಂದೀಶ, ಬ್ರಹ್ಮ. ಚಿಚ್ಛಕ್ತಿ, ಶಕ್ತಿ. ಶಿವಶಕ್ತಿರಭೇದ. ಮಾಯಾ, ಉಪಾಧಿ, ಈಶ್ವರ, ಜೀವ, ನಿರ್ಲೇಪಕತ್ವ, ರಾಜರಾಜೇಶ್ವರಿ, ಬ್ರಹ್ಮ, ವಿಷ್ಣು. ರುದ್ರ, ಶ್ರೀದೇವಿಯ ದರ್ಶನ, ನಭೋವಚನ, ತಪ, ಶುದ್ಧಭಾವದಲ್ಲಿರುವ ಬ್ರಹ್ಮ, ದೇಹದಲ್ಲಿರುವ ಆತ್ಮ, ವರಬೇಡುವಿಕೆ, ವರವು, ಅಭೇದ ಭಾವನೆ, ತ್ರಿಮೂರ್ತಿಗಳಿಗೆ ನ್ಯಾಯ ನಿರ್ಣಯ, ಶರೀರ ನುಂಗೋಣ, ಆಲದೆಲೆ, ಬ್ರಹ್ಮನ ಮುಖ, ರಾಕ್ಷಸರಾದ ಮಧುಕೈಟಬರ ವಧೆ ಮುಂತಾದ ವಿಷಯಗಳು ಸುಂದರವಾಗಿ ಅನುಭವಗಮ್ಯವಾಗಿ, ಸುಲಭವಾಗಿ ಬಣ್ಣಿಸಲ್ಪಟ್ಟಿವೆ.

ಕರ್ಮಿಗೆ ಫಲೇಚ್ಛೆ, ಕರ್ತೃತ್ವಾಭಿಮಾನಗಳೇ ವಿರೋಧಿ ಗಳು. ಮಧುವಿಷ್ಟಂ ಕರ್ಮಫಲಂ, (ಕಠೋಪನಿಷತ್)

ಕಾಮುಸಸ್ಯ ಕರ್ಮಣಃ ಕರ್ತೃತ್ವಾಭಿಮಾನಃ, (ತಂತ್ರಭಾಷೆ) ಬ್ರಹ್ಮನು ಸೃಷ್ಟಿ ನಿರ್ಮಾಣ ಕಾಲದಲ್ಲಿ ತನಗೆ ವಿಘ್ನರಾದ ಫಲೇಚ್ಛೆ, ಕರ್ತೃತ್ವಾಭಿಮಾನಗಳೆಂಬ ರಕ್ಕಸರ ದಮನದ ಸಲು ವಾಗಿ ದೇವಿಯ ಧ್ಯಾನಮಾಡಿದನು. ಆಕೆಯು ಅಕರ್ತಾ, ಅಭೋಕ್ತಾ, ರೂಪಸುದರ್ಶನ ಚಕ್ರದಿಂದ ಅವರನ್ನು ಸಂಹರಿ ದಳು. ಈ ಕಥೆಯಿಂದ ಕರ್ತೃತ್ವಾಭಿಮಾನಿಯು ಕರ್ಮಫಲ ಗಳನ್ನು ಹೊಂದಿ ಜನನ ಮರಣಕ್ಕೆ ಒಳಪಡುವನು. ಶರೀರ ಹಾಗೂ ಬ್ರಹ್ಮಾಂಡದೊಳಗಿನ ಸರ್ವವ್ಯವಹಾರವು ಶಕ್ತಿಯ ಪ್ರೇರಣೆಯಿಂದಲೇ ನಡೆಯುತ್ತಿರುವದು. ಆದ್ದರಿಂದ ಆಕೆಯೇ ಸರ್ವಕರ್ಮಕರ್ತಳು. ನಾನು ಕರ್ಮಗಳನ್ನು ಮಾಡುವವನಲ್ಲ. ಮತ್ತು ಕರ್ಮಫಲಗಳನ್ನು ಅನುಭವಿಸುವವನೂ ಅಲ್ಲ. ಹೀಗೆ ತಿಳಿಯುವವನು ನಿರ್ಲಿಪ್ತನಾಗಿ ಪರಮಾನಂದವನ್ನು ಹೊಂದು ವನು. ಶಕ್ತಿಯೇ ಪ್ರಪಂಚಕ್ಕೆ ಉಪಾದಾನಕಾರಣಳು. ಈಕೆಯು ಸ್ವಲೀಲೆಯಿಂದ ಪುರುಷಭಾವವ ಹೊಂದಲು ನಾರಾಯಣನೆನಿಸು ವಳು. ನಾರಾಯಣ ಚರಾಚರ ಜಗತ್ತಿಗಧಿಷ್ಠಾನ ವಿಷ್ಣು ಅಂದರೆ ವ್ಯಾಪಕವಾದ ನಿತ್ಯವಸ್ತು. ವಿಷ್ಣು ಮೂಲಪ್ರಕೃತಿ, ಮೂಲಮಾಯೆ ಇವು ಪರ್ಯಾಯ ಶಬ್ದಗಳು. ಈ ವಿಷ್ಣು ಆದಿಶೇಷನ ಮೇಲೆ ಅಂದರೆ ಮೂಲ ಉಳಮೆಯ ಸ್ವರೂಪ ವಾದ ಸದ್ರೂಪ ಬ್ರಹ್ಮನಲ್ಲಿ ಮಲಗಿ ನಿದ್ರಿಸುತ್ತಿದ್ದನು. ಅಂದರೆ ಐಕ್ಯನಾಗಿ ಆನಂದಿಸುವನೆಂದು ತಿಳಿಯತಕ್ಕದ್ದು.

೨) **ಉಪಾಸನಾಕಾಂಡ** :— ಈ ವಿಭಾಗದಲ್ಲಿ ಆಯುಧ ಗಳೆಂದರೆ ಯಾವವು ? ಮಹಿಷಾಸುರ ವಿಚಾರ, ಮುಷ್ಟ,

ಧ್ರುಷ್ಟ ದೇವತೆಗಳು, ಮಹಾಲಕ್ಷ್ಮಿ, ಸಿಂಹ, ಆಸುರೀ ಸಂಪತ್ತು, ಸ್ವರೂಪರೂಪಯುದ್ಧ, ರಾಕ್ಷಸರ ವಧೆ, ರಸಿಲೋಮ, ಲೋಭದ ಫಲ, ರುದಗ್ರ, ವಿಜಯ, ಸಿಟ್ಟು ಹುಟ್ಟುವ ಕಾರಣ, ಸಿಟ್ಟು ಜಯಿಸುವದು, ಚಿಕ್ಷುರ, ಕಾಮನ ಬಲ, ಕಾಮವು, ಕಾಮವಿಜಯ, ಬಿಡಾಲ, ಮಹಿಷ, ಮಧುಪಾನ, ಬಲಿದಾನ, ದೇವಿ ಸ್ತುತಿ ಮುಂತಾದ ವಿಷಯಗಳ ಯಥಾರ್ಥ ತಾತ್ಪರ್ಯಾರ್ಥ ವಿವರಣೆಯನ್ನು ಹೃದಯಂಗಮವಾಗಿ ಬಣ್ಣಿಸಲಾಗಿದೆ. ಸಕಾಮೋಪಾಸನೆಯ ಫಲ ಅಸ್ಥಿರವಾದ್ದರಿಂದ ತ್ಯಾಜ್ಯವು. ನಿಷ್ಕಾಮ ಉಪಾಸನೆಯಿಂದ ಚಿತ್ತಶುದ್ಧಿಯಾಗಿ, ಪರಶಿವನ ದರ್ಶನವಾಗುವದು. ಚಿತ್ತಶುದ್ಧಿಗೆ ಕಾಮಾದಿ ವೃತ್ತಿಗಳು ವಿರೋಧಿಗಳಾಗಿ ವೈರಿಯಂತಿರುವವು. ಕಾರಣ ಅವುಗಳನ್ನು ಜಯಿಸಿ ತನ್ನ ಸ್ವಾಧೀನಮಾಡಿಕೊಳ್ಳದ ಹೊರತು ಚಿತ್ತಶುದ್ಧಿಯಾಗದು. ಕಾಮಾದಿ ಅರಿ ವಿಜಯವೇ ಚಿತ್ತಶುದ್ಧಿಗೆ ಮುಖ್ಯೋಪಾಯವು. ಆ ಅರಿ ವಿಜಯವನ್ನೇ ಈ ಉಪಾಸನಾಕಾಂಡದಲ್ಲಿ ಹೇಳಲಾಗಿದೆ.

೩) **ಜ್ಞಾನಕಾಂಡ:—** ೧೦ನೆಯ ಅಧ್ಯಾಯದಿಂದ ೧೮ನೆಯ ಅಧ್ಯಾಯದವರೆಗಿನದೆಲ್ಲವೂ ಜ್ಞಾನಕಾಂಡ. ಶುಂಭವಧೆಯಿಂದ ಅಂದರೆ ಅಜ್ಞಾನನಾಶದಿಂದ ಜೀವನ ಶಕ್ತಿಯ ಅಥವಾ ಸ್ವರೂಪದ ಅನುಭವ ಮಾಡಿಕೊಂಡು ಆನಂದಮಯನಾಗುವದನ್ನು ತೋರಿಸಿದೆ. ಅನುಭವ ಜ್ಞಾನಕ್ಕೆ ಬಾಧಕವಾದ ಅಹಂ ಮಮಾದಿಗಳ ನಿವಾರಣದ ವರ್ಣನೆ ಇದೆ. ಶುಂಭ– ಅಹಮ್ ದ್ವೈತಭಾವಸಂಪನ್ನಃ ಅಹಂಕಾರಃ ಬ್ರಹ್ಮದಾರಣ್ಯೆ,

ಅಜ್ಞಾನನಿಶುಂಭ- ಮಹತ್ವ. ಅಹಂ, ಮಮ ಇವೆರಡೂ ಅಸ್ಮತ್ ಶಬ್ದದಿಂದ ಹುಟ್ಟಿರುವ ಕಾರಣ ಮತ್ತು ಅಹಂ ತೋರಿದ ನಂತರವೇ ಇದಂ ತೋರುವವಾದ್ದರಿಂದ ಅಹಂ- ಅಣ್ಣ ಇದಂ- ತಮ್ಮ. ಇವರು ಅಜ್ಞಾನದಲ್ಲಿ ಸಂಚರಿಸುವ ರಾಗದ್ವೇಷಾದಿ ಅಸುರರಿಗೆ ಅರಸರು. ಇವರು ಅತಿಬಲ ಭುಜರು. ಇವರ ವಶದಲ್ಲಿಯೇ ಸಮಸ್ತ ಲೋಕದ ಪ್ರಾಣಿ ಗಳಿರುತ್ತವೆ. ಇವರೇ ಸಕಲರ ಭವಬಂಧನಕ್ಕೆ ಕಾರಣರು. ಚಿಚ್ಛಕ್ತಿಯ ಹೊರತು ಯಾರಿಂದಲೂ ಸಾಯದ ವರವನ್ನು ಪಡೆದು ಸರ್ವಲೋಕಗಳಿಗೆ ಅಧಿಪತಿಗಳಾಗಿರುವರು. ಶಿವ ಪೂಜೆಯಲ್ಲಿ ಜ್ಞಾನದ ನಾಮಾಂತರ ಮೊದಲು ಶಿವನಿಗೆ ಮುಟ್ಟಿಸತಕ್ಕ ಸರ್ವ ಪದಾರ್ಥಗಳನ್ನು ತಾವೇ ಸೇವಿಸಹತ್ತಿ ದರು. ನುಡಿಯುವ, ಪಿಡಿಯುವ, ನಡೆಯುವ, ಕೇಳುವ, ಮೂಸಿಸುವ, ತಿನ್ನುವ, ಸ್ಮರಿಸುವ, ಅರಿಯುವ, ಸರ್ವ ಇಂದ್ರಿ ಯಾಂತಃಕರಣಗಳೆಂಬ ದೇವತೆಗಳ ಕರ್ಮವನ್ನು ನಾನು ಪಿಡಿ ಯುವೆ. ನಾನು ಹೀಗೆ ಅನ್ನುವದರಿಂದ ಸರ್ವರ ಕರ್ಮಾಧಿ ಕಾರವನ್ನು ಅಹಂಕಾರನೇ ತಕ್ಕೊಂಡು ಎಲ್ಲಕ್ಕೂ ತಾನೇ ಒಡೆಯನಾಗಿದ್ದನು. ಹಿಮವಂತಸುತೆ ಶುದ್ಧಾಂತಃಕರಣದಿಂದ ಹುಟ್ಟಿದ ಬ್ರಹ್ಮಾಕಾರ ವೃತ್ತಿಯೇ ಪಾರ್ವತಿ, ಗೌರಿ ಎನಿಸ್ಸ ವಳು. ಈಕೆಯು ಆನಂದ ಸ್ವರೂಪಳು; ಶಿವನಿಗೆ ಅರ್ಧಾಂಗಿನಿಯು. ಈ ಗೂಢವಾದ ಅರ್ಥದಿಂದಲೇ ಈ ಜ್ಞಾನಕಾಂಡವು ಕೊನೆ ಗೊಳ್ಳುತ್ತದೆ. ಈ ವಿಭಾಗದಲ್ಲಿ ಶೀರ್ಷಿಕೆಗಳಿಗೆ ತಕ್ಕಂತೆ ಔಚಿತ್ಯಪೂರ್ಣವಾದ ಅರ್ಥವಿವೆ. ಚಂಡಮುಂಡರು, ಸುಗ್ರೀವ,

ಧೂಮ್ರಲೋಚನ, ರಕ್ತಬೀಜ, ನಾರಾಯಣೀಯ ಸ್ತುತಿ, ಮುಂತಾದವುಗಳು ಸುಂದರವಾಗಿ ವರ್ಣಿಸಲ್ಪಟ್ಟಿವೆ.

೪) **ಜೀವನ್ಮುಕ್ತಿ :—** ಇದರಲ್ಲಿಯೂ [೧೮ ನೇ ಸಂಧಿಯಲ್ಲಿ] ಜೀವನ್ಮುಕ್ತಿಯ ಸಾಧನ, ಜನರ ಸಂಗ, ಪ್ರಪಂಚ, ವಾಚನಾತ್ರಯ, ದೇಹವಾಸನಾ, ಉಪಾಸನೆ. ತತ್ವಮಸಿ, ತ್ವಂ ಪದದ ಶುದ್ಧ ಅರ್ಥ, ತತ್ಪದದ ಶುದ್ಧ ಅರ್ಥ, ಅಸಿಸ್ವರೂಪ, ವಾಸನಾಕ್ಷಯ, ಬ್ರಹ್ಮಭಾವದ ಫಲ, ನಾಲ್ಕು ಸ್ಥಿತಿ, ಸಪ್ತ ಭೂಮಿಕೆ, ಸುಖೇಚ್ಛೇ, ಸುವಿಚಾರ, ನಿಸ್ಸಂಗ, ಆನಂದಿನಿ, ತುರ್ಯ, ತುರ್ಯಾತೀತ, ಅವಸ್ಥೆ, ಮುಂತಾದವುಗಳ ಬಗ್ಗೆ ಸುದೀರ್ಘವಾದ ವಿವರಣೆ ಬಂದಿದೆ. ಇದರಲ್ಲಿ ಹೇಳಿದ ಭಕ್ತಿ, ಜ್ಞಾನ, ವಿರತಿ, ವಾಸನಾಕ್ಷಯಾದಿಗಳ ಬಗ್ಗೆ ತಿಳಿದದ್ದರಲ್ಲಿ ಬುದ್ಧಿ ದೃಢವಾಗಿ ನೆಲೆಗೊಂಡು ಬೇರೆ ವಿಮತಿದೋರದೆ ನಿಜಾನಂದವು ಅಚ್ಚಳಿಯಂದೇ ಇರುವದೇ ಮುಕ್ತಿಯು. ಜೀವವಿದ್ದೂ ಜೀವಭಾವದಿಂದ ಬಿಡುಗಡೆ ಹೊಂದಿದವನು ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ. ಜ್ಞಾನದಲ್ಲಿ ಪರಮಾನಂದ ನೆಲೆಗೊಂಡವನೇ ಜೀವನ್ಮುಕ್ತನು.

ಮುಖ್ಯವಾಗಿ ಮೂರು ಚರಿತ್ರೆಗಳಿಗೆ ವಿರೋಧಿ ರಕ್ಕಸರ ಸಂಹರಿಸಿ, ಸ್ವರೂಪಸ್ಥಿತಿ ಪ್ರಾಪ್ತಿದ್ವಾರಾ ಪರಮಾನಂದವನ್ನುಂಟು ಮಾಡಿಕೊಡುವದೇ ಶ್ರೀ ಚಿದಾನಂದಾವಧೂತರ ಮುಖ್ಯ ಧ್ಯೇಯವಾಗಿರುವದು. ವೇದಾಗಮೋಪನಿಷತ್ತುಗಳ

ಲ್ಲಿಯು ಮುಖ್ಯ ಸಾರವೆಲ್ಲ ಈ ಪುರಾಣದಲ್ಲಿ ಬಂದಿರುವದು. ಸಾಧಕರು ಇದರಲ್ಲಿ ಹೇಳಿದ ಪ್ರಕಾರ ವರ್ತಿಸಿ, ಸರ್ವಫಲಗಳನ್ನೂ, ಜೀವನ್ಮುಕ್ತಿಯನ್ನೂ ಹೊಂದಬಹುದು.

## ೫. ಬ್ರಹ್ಮಸ್ವರೂಪ

ಅನೇಕ ಕಾಲಗಳ ವರೆಗೆ ಹೀಗೆ ಅದೆಷ್ಟೋ ಪವಿತ್ರ ಗ್ರಂಥಗಳ ರಚನೆ ಮಾಡುತ್ತ ಶರಣಾಗತರಾದ ಸದ್ಭಕ್ತರಿಗೆ ಮುಕ್ತಿಯ ಮಾರ್ಗವನ್ನು ತೋರಿಸಿ ಅವರ ಜನ್ಮ ಸಾರ್ಥಕಗೊಳಿಸಿದ್ದಾರೆ. ಕೊನೆಯ ವರೆಗೆ ಲೀಲಾಮೂರ್ತಿಯಾಗಿ ಸ್ವಯಂ ಪ್ರಕಾಶ ರೂಪಜ್ಯೋತಿಯ ಪ್ರತ್ಯಗಾತ್ಮಸ್ವರೂಪದಿಂದ ಬೆಳಗುತ್ತ ಮಾಯಾ ಅವಿದ್ಯಾದಿ ಉಪಾಧಿರಹಿತರಾಗಿ, ಆವರಣರಹಿತ ಚೈತನ್ಯ ಜ್ಯೋತಿಯಾಗಿ, ಆತ್ಮಜ್ಯೋತಿಗೆ ಶಿವಜ್ಞಾನವು ಆಧಾರವಾಗಿರುವಂತೆ ವರ್ತಿಸಿ, ಕಾಲತ್ರಯಾತೀತರಾಗಿ, ಬ್ರಹ್ಮಜ್ಞಾನಿಗಳಾಗಿ, ದಿವ್ಯತೇಜಸ್ಸಿನಿಂದೊಡಗೂಡಿದ ಆ ಮಹಾತ್ಮರಾದ ಶ್ರೀ ಚಿದಾನಂದಾವಧೂತ ರಾಜಯೋಗಿಗಳು ಒಂದು ಶುಭಮುಹೂರ್ತದಲ್ಲಿ ಸಮಾಧಿಸ್ಥರಾಗಿ ಕೊನೆಗೆ ಈ ನಶ್ವರವಾದ ದೇಹವನ್ನು ಬಿಟ್ಟು ಶ್ರೀ ಬಗಳಾಂಬಾ ಚಕ್ರದಲ್ಲಡಕವಾಗಿ ಈ ಜಡಭೂಮಿಯಿಂದಗಲಿ ವಿಶಾಲಾತ್ಮದಲ್ಲಿ ಕೂಡಿಕೊಂಡು ಕಾಣದಂತಾದರು. ಈಗಲೂ ಶ್ರೀ ಬಗಳಾಂಬಾ ದೇವಿಯ ಹಿಂದಿನ ಬದಿಯಲ್ಲಿರುವ ಗವಿಯಲ್ಲಿಯೇ ಅವರ ಸಮಾಧಿಯಿರುವದೆಂದು ಜನರು ಹೇಳುತ್ತಾರೆ.

ಶ್ರೀ ಚಿದಾನಂದಾವಧೂತ ರಾಜಯೋಗಿಗಳ ಆತ್ಮವು ಪರಮಾತ್ಮನಲ್ಲಿ ಬೆರೆತ ಕ್ಷಣವೇ ರವಿಯು ವಿರಹವ್ಯಥೆಯಿಂದ ಬಳಲುತ್ತ, ಕೊನೆಗೆ ಕಣ್ಮರೆಯಾದನು. ಪಶು, ಪಕ್ಷಿ, ವಾಯು,

ಅಗ್ನಿ, ವರುಣ ಮೊದಲಾದವರು ತಮ್ಮ ತಮ್ಮ ಕರ್ತವ್ಯಗಳನ್ನು ಮರೆತು ವಿರಹ ದುಃಖದಲ್ಲಿ ಬೆರೆತು ಹೋದರೆನ್ನಬಹುದು. ಶ್ರೀ ಚಿದಾನಂದರ ಪವಿತ್ರಾತ್ಮವು ಆಕಾಶದಲ್ಲಿ ಬೆರೆತು ಹೋದುದರಿಂದ ಸರ್ವರೂ ಶೋಕಿಸುತ್ತಿರುವಾಗ ಆಕಾಶವು ಮಾತ್ರ ಪರಮ ಧನ್ಯತೆಯನ್ನು ಹೊಂದಿದಂತೆ ಸಂತಸದಿಂದ ಪ್ರಸನ್ನವಾಗಿತ್ತು.

ಮಹಾತ್ಮರಾದವರು ಆಗಾಗ್ಗೆ ಈ ಕರ್ಮಭೂಮಿಯಲ್ಲಿ ಅವತರಿಸಿ ದುಷ್ಕರ್ಮಗಳನ್ನಳಿಸಿ ಸತ್ಕರ್ಮಗಳು ಜಾಗ್ರತಗೊಳ್ಳುವಂತೆ ಪರಿಶ್ರಮ ವಹಿಸಿ ಲೋಕೋದ್ಧಾರ ಕೃತಿಗಳನ್ನು ರಚಿಸಿ ಹೋಗುತ್ತಿರುವದು ಸ್ವಾಭಾವಿಕ. ಅವರ ಆದರ್ಶವನ್ನೇ ಮುಂದಿಟ್ಟುಕೊಂಡು ಜಗತ್ತು ಆಗಿಹೋದ ಮಹಾತ್ಮರನ್ನು ಸ್ಮರಿಸುತ್ತ ಉಳಿಸಿಬಿಟ್ಟ ಆದರ್ಶ ತತ್ವಗಳನ್ನು ಅರಿತುಕೊಂಡು ಸನ್ಮಾರ್ಗದಲ್ಲಿ ಸಾಗುತ್ತಿರುವ ಪರಿಪಾಠವಿದೆ. ಪರಶಿವನು ತೀವ್ರ ಕಲಿಯುಗದಲ್ಲಿ ಅವತರಿಸಿ ಭೂಭಾರವನ್ನು ಇಳುಹಲೆಂದು ಮನುಕುಲದ ಪರವಾಗಿ ಪ್ರಾರ್ಥಿಸೋಣ.



# ಅನುಬಂಧಗಳು

೧) ಉಪನಿಷತ್ ಭಾವಧಾರೆ

—ಶ್ರೀ ಸೋಮನಾಥಾನಂದ

೨) ಶರಣರ ಅನುಭಾವ ಸಾಹಿತ್ಯ

—ಡಾ. ಎಚ್. ತಿಪ್ಪೇರುದ್ರಸ್ವಾಮಿ

೩) ವಚನಗಳಲ್ಲಿ ವೀರಶೈವಧರ್ಮ

—ಡಾ॥ ಎಚ್. ತಿಪ್ಪೇರುದ್ರಸ್ವಾಮಿ

೪) ಕರ್ನಾಟಕ ಕವಿಚರಿತೆ

—ಶ್ರೀ ಆರ್. ನರಸಿಂಹಾಚಾರ್ಯ

೫) ಭಗವದ್ಗೀತಾ ವೀರಶೈವ ಭಾಷ್ಯ

—ವಿದ್ವಾನ ಡಾ॥ ಟಿ. ಜಿ. ಸಿದ್ದಪ್ಪಾರಾಧ್ಯ

೬) ಶ್ರೀ ಸದ್ಗುರು ಶಿವಾನಂದ ಮಹಾಸ್ವಾಮಿಗಳ ಪುರಾಣ

—ಶ್ರೀ ಸದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿಗಳು ಗದಗ.

೭) ಶ್ರೀ ಚಿದಾನಂದಾವಧೂತರ ಅಧ್ಯಾತ್ಮ ಜೀವನ

—ಶ್ರೀ ಎನ್. ಜಿ. ಚಾಡಗೌಡರ

೮) ಜ್ಞಾನಸಿಂಧು ಹಾಗೂ ಶ್ರೀ ದೇವಿಮಹಾತ್ಮ್ಯೆ

—ಶ್ರೀ ಚಿದಾನಂದಾವಧೂತರು

# ಉಪನ್ಯಾಸ ಗ್ರಂಥಮಾಲೆ

## ಇತ್ತೀಚಿನ ಪ್ರಕಟಣೆಗಳು

ಬೆಲೆ: ಪ್ರತಿ ಒಂದಕ್ಕೆ ೨೫ ಪೈಸೆ

---

೧. ಪೋಲೀಸಿನವರು ಮತ್ತು ಸಾರ್ವಜನಿಕರು —ಎನ್. ನಾಗರಾಜರಾವ್

೨. ಅಭಿರುಚಿಗಳು —ವಿ. ಎಸ್. ಧರಣೇಂದ್ರಯ್ಯ

೩. ಕಿತ್ತೂರಿನ ಇತಿಹಾಸ —ವ್ಹಿ. ಜಿ. ಮಾರೀಹಾಳ

೪. ಆರ್ಯಭಟ —ಎಂ. ಆರ್. ಹುಂಕ್ಯಳಿ

೫. ಸರ್ವಜ್ಞನ ವೀರಶೈವ ಧರ್ಮದೃಷ್ಟಿ —ಎ. ಎಸ್. ಹಿರೇಮಠ

೬. ಯಲಬುರ್ಗಿಯ ಸಿಂದರು —ಬಿ. ವ್ಹಿ. ಶಿರೂರ

೭. ಶ್ರೀ ನಿಜಗುಣ ಶಿವಯೋಗಿಗಳ ಭಕ್ತಿ, ಜ್ಞಾನ, ವೈರಾಗ್ಯ —ಪಿ. ಎಂ. ಸಿದ್ಧಯ್ಯ

೮. ಧೂಮಪಾನ : ಒಂದು ವಿಷಪಾನ —ಆರ್. ಸಿ. ಅಂಗಡಿ

೯. ಶರಣರ ಕಾಯಕ ತತ್ವ —ಎಂ. ಪಿ. ಎಂ. ಶಾಂತವೀರಯ್ಯ

೧೦. ಕಣ್ಣುಗಳ ರಕ್ಷಣೆ ಹಾಗೂ ಅವುಗಳ ಬಗ್ಗೆ ಎಚ್ಚರಿಕೆ —ಎಚ್. ತಿಮ್ಮಯ್ಯ

---

ವ್ಯಾಸಂಗವಿಸ್ತರಣ ಮತ್ತು ಪ್ರಕಟನ ವಿಭಾಗ,

**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**